ಸ್ಥಾನಮಾನ ನೀಡಲಾಗಿದೆ. ಭಾಗ 9 ‘ಎ’ ಯಲ್ಲಿ 243 ‘ಪಿ' ಯಿಂದ 243 ‘ಝಡ್ ಜಿ’ ವರೆಗಿನ ವಿಧಿಗಳಡಿಯಲ್ಲಿ ಪೌರಾಡಳಿತದ ಕುರಿತು ತಿಳಿಸಲಾಗಿದೆ.

ಕರ್ನಾಟಕದಲ್ಲಿ ಸ್ವಾತಂತ್ರ್ಯಪೂರ್ವದಲ್ಲಿಯೇ ಅನೇಕ ಸ್ಥಳೀಯ ಸರ್ಕಾರಗಳು ಕಾರ್ಯನಿರ್ವಹಿಸಿದ್ದವು ಎಂದು ತಿಳಿದು ಬಂದಿದೆ. ಸ್ವಾತಂತ್ರ್ಯನಂತರ ಸ್ಥಳೀಯ ಸರ್ಕಾರಗಳ ಸ್ಥಾಪನೆ ಹಾಗೂ ಬಲವರ್ಧನೆಗಾಗಿ ನಮ್ಮ ರಾಜ್ಯವು ಹಲವು ಸಮಿತಿಗಳನ್ನು ರಚಿಸಿ ಸಲಹೆ ಪಡೆದು ಅವುಗಳನ್ನು ಅನುಸರಿಸಿದೆ. ನಮ್ಮ ರಾಜ್ಯ ಸರ್ಕಾರವು 1983 ರಲ್ಲಿ ಪಂಚಾಯತ್ ರಾಜ್ ಕಾಯಿದೆಯನ್ನು ಪರಿಚಯಿಸಿ 1985 ರಿಂದ ಆ ಕಾಯಿದೆಯನ್ನು ಜಾರಿಗೆ ತಂದಿದೆ. ಈ ಕಾಯಿದೆಯ ಪ್ರಕಾರ ಜಿಲ್ಲಾ ಪರಿಷತ್ ಮತ್ತು ಮಂಡಲ ಪಂಚಾಯಿತಿಗಳು ಪ್ರತ್ಯಕ್ಷ ಚುನಾವಣೆಗಳ ಮೂಲಕ ರಚಿತವಾಗಬೇಕೆಂದು ಸೂಚಿಸಲಾಗಿದೆ. ಸಂವಿಧಾನದ 73 ನೇ ತಿದ್ದುಪಡಿ ಕಾಯ್ದೆಯನ್ವಯ 1993 ರಲ್ಲಿ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ ರಚಿಸಲಾಯಿತು. 2015 ರಲ್ಲಿ ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ ಅಧಿನಿಮಯ 1993 ಎಂದು ಮರುನಾಮಕರಣಮಾಡಲಾಗಿದೆ. ಇದರನ್ವಯ ಪ್ರಸ್ತುತ ಕರ್ನಾಟಕದಲ್ಲಿ ಪಂಚಾಯತ್ ರಾಜ್ ವ್ಯವಸ್ಥೆ ಜಾರಿಯಲ್ಲಿದೆ.

## ಸ್ಥಳೀಯ ಸರ್ಕಾರದ ಉದ್ದೇಶಗಳು:

1. ಸ್ಥಳೀಯ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಲು ಸ್ಥಳೀಯರನ್ನೇ ಬಳಸಿಕೊಳ್ಳುವುದು.
2. ಜನ ಸಾಮಾನ್ಯರಿಗೆ ಆಡಳಿತಜ್ಞಾನ ಒದಗಿಸುವುದು.
3. ಅಧಿಕಾರವನ್ನು ವಿಕೇಂದ್ರೀಕರಿಸಿ ಆಡಳಿತವನ್ನು ಹೆಚ್ಚು ಪರಿಣಾಮಕಾರಿಯಾಗುವಂತೆ ಮಾಡುವುದು.
4. ತಳಮಟ್ಟದ ಹಂತದಲ್ಲಿ ಜನರಿಗೆ ನಾಯಕತ್ವದ ಗುಣಲಕ್ಷಣಗಳನ್ನು ಅಭಿವೃದ್ದಿಗೊಳಿಸುವುದು ಅಥವಾ ತರಬೇತಿ ನೀಡುವುದು.

## ಸ್ಥಳೀಯ ಸರ್ಕಾರದ ಕಾರ್ಯಗಳು:

ಸ್ಥಳೀಯ ಸರ್ಕಾರ ಕೆಳಕಂಡ ಪ್ರಮುಖ ಕಾರ್ಯಗಳನ್ನು ನಿರ್ವಹಿಸುತ್ತದೆ. ಅವುಗಳೆಂದರೆ;

1. ಪಂಚಾಯಿತಿಯ ಆಸ್ತಿಯನ್ನು ರಕ್ಷಿಸಿ ಕಾಪಾಡಿಕೊಳ್ಳುವುದು.
2. ಸ್ಥಳೀಯ ಮಂಡಳಿಯ ವಾರ್ಷಿಕ ಆಯವ್ಯಯದ ಮುಂಗಡ ಪತ್ರ ತಯಾರಿಸುವುದು.
3. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಯೋಜನೆಗಳನ್ನು ಕೈಗೊಳ್ಳುವುದು.

4. ರಸ್ತೆ ನಿರ್ಮಾಣ, ವಿದ್ಯುತ್ತೀಕರಣ, ಗೃಹನಿರ್ಮಾಣ ಮತ್ತು ಕುಡಿಯುವ ನೀರಿನ ಸರಬರಾಜು ಮುಂತಾದ ಅಭಿವೃದ್ಧಿ ಕೆಲಸಗಳಿಗೆ ಕಾರ್ಯಯೋಜನೆ ರೂಪಿಸಿ ಅನುಷ್ಠಾನಗೊಳಿಸುವುದು.
5. ಪ್ರಾಥಮಿಕ, ಪ್ರೌಢ, ವಯಸ್ಕರ ಮತ್ತು ಅನೌಪಚಾರಿಕ ಶೈಕ್ಷಣಿಕ ಕಾರ್ಯಕ್ರಮಗಳನ್ನು ಪ್ರೋತ್ಸಾಹಿಸುವುದು.
6. ತಮ್ಮ ಪ್ರದೇಶಗಳಲ್ಲಿ ಸ್ವಚ್ಛತೆ ಮತ್ತು ನಿರ್ಮಲೀಕರಣವನ್ನು ಕಾಪಾಡುವುದು.
7. ಎಲ್ಲಾ ಪ್ರಕಾರದ ಮಾಲಿನ್ಯಗಳನ್ನು ತಡೆಗಟ್ಟಿ ಉತ್ತಮ ಆರೋಗ್ಯಕರ ಸವಲತ್ತುಗಳನ್ನು ಒದಗಿಸುವುದು.
8. ಅವಶ್ಯಕ ಪಡಿತರಗಳಾದ ಆಹಾರಧಾನ್ಯ, ಸೀಮೆಎಣ್ಣೆ ಇತ್ಯಾದಿಗಳ ವಿತರಣೆಗೆ ಸೂಕ್ತ ವ್ಯವಸ್ಥೆಯನ್ನು ನಿರ್ಮಿಸಿ ಸವಲತ್ತುಗಳನ್ನು ಒದಗಿಸುವುದು.
9. ಜನನ ಮತ್ತು ಮರಣಗಳ ನೋಂದಣಿ ಪ್ರಾಮಾಣಿಕವಾಗಿ ಆಗುತ್ತಿರುವುದನ್ನು ಖಾತ್ರಿಪಡಿಸಿಕೊಳ್ಳುವುದು.
10. ಕೃಷಿ, ಪಶುಸಂಗೋಪನೆ, ಖಾದಿ ಮತ್ತು ಕರಕುಶಲ ಉದ್ಯೋಗಗಳನ್ನು ಪ್ರೋತ್ಸಾಹಿಸುವುದು.
11. ಮಣ್ಣು, ನೀರು ಮತ್ತು ಅರಣ್ಯ ರಕ್ಷಣೆಗೆ ಕಾರ್ಯಕ್ರಮಗಳನ್ನು ಕೈಗೊಳ್ಳುವುದು.
12. ರೈತರಿಗೆ ಸಹಾಯ ಮಾಡುವ ಸಲುವಾಗಿ ಕೃಷಿ ವಿಸ್ತರಣಾ ಕಾರ್ಯಕ್ರಮಗಳನ್ನು ನಡೆಸುವುದು.
13. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ದುರ್ಬಲವರ್ಗ, ಮಹಿಳೆ ಮತ್ತು ಮಕ್ಕಳಿಗಾಗಿ ಕಲ್ಯಾಣ ಯೋಜನೆಗಳನ್ನು ರೂಪಿಸಿ ಅನುಷ್ಠಾನಕ್ಕೆ ತರುವುದು.
14. ವಾಚನಾಲಯ, ಬೀದಿ ದೀಪಗಳು ಮತ್ತು ಮಾರುಕಟ್ಟೆ ಸವಲತ್ತುಗಳನ್ನು ಒದಗಿಸಿ ಕೊಡುವುದು.
15. ಶುಲ್ಕ, ದಂಡ ಮತ್ತು ತೆರಿಗೆಗಳನ್ನು ಸಂಗ್ರಹಿಸುವುದು.
16. ಸರ್ಕಾರದ ಕಲಾಣ ಯೋಜನೆಗಳಿಗೆ ಫಲಾನುಭವಿಗಳನ್ನು ಮುಕ್ತವಾಗಿ ಗುರುತಿಸುವುದು.

### ಆದಾಯದ ಮೂಲಗಳು:

ಸ್ಥಳೀಯ ಸ್ವಯಂ ಸರ್ಕಾರಗಳು ವಿವಿಧ ಯೋಜನೆಗಳನ್ನು ಅನುಷ್ಠಾನಗೊಳಿಸಲು ಆರ್ಥಿಕ ನಿಧಿ ಅಥವಾ ಬಂಡವಾಳದ ಅವಶ್ಯಕತೆಯಿರುತ್ತದೆ. ಈ ಸಂಸ್ಥೆಗಳ ಪ್ರಮುಖ ಆದಾಯದ ಮೂಲಗಳೆಂದರೆ:

1. ನೀರು, ಆರೋಗ್ಯ, ಶಿಕ್ಷಣ, ಗ್ರಂಥಾಲಯ ಮತ್ತು ವಾಚನಾಲಯಗಳ ಮೇಲಿನ ಉಪಕರದಿಂದ ಸಂಗ್ರಹವಾಗುವ ಮೊತ್ತ.
2. ಕಟ್ಟಡ ತೆರಿಗೆ, ಖಾಲಿ ಜಾಗದ ತೆರಿಗೆ, ವ್ಯಾವಹಾರಿಕ ಸಂಸ್ಥೆಗಳ ಮೇಲಿನ ತೆರಿಗೆ, ಮಾರುಕಟ್ಟೆ, ಮನರಂಜನಾ ಮಂದಿರ ಮತ್ತು ಜಾಹೀರಾತುಗಾರರಿಂದ ವಸೂಲಾಗುವ ಒಟ್ಟು ತೆರಿಗೆ ಮೊತ್ತ.
3. ಪ್ರವಾಸಿ ತಾಣಗಳಿಂದ ಸಂಗ್ರಹಿಸಿದ ತೆರಿಗೆ.
4. ಪಂಚಾಯತ್ ಆಸ್ತಿಗಳಿಂದ ಬರುವ ಬಾಡಿಗೆ ಹಾಗೂ ಗುತ್ತಿಗೆ ಹಣ.
5. ರಾಜ್ಯ ಸರ್ಕಾರದಿಂದ ದೊರೆಯುವ ಧನಸಹಾಯ ಅಥವಾ ಅನುದಾನ ಮೊತ್ತ.

## ಸ್ಥಳೀಯ ಆಡಳಿತ ಸಂಸ್ಥೆಗಳ ರಚನೆ:(Composition of Local Governing Bodies)

**ಗ್ರಾಮ ಸಭೆಗಳು:** ಗ್ರಾಮ ಸಭೆಯುಗ್ರಾಮೀಣ ಸ್ಥಳೀಯ ಆಡಳಿತ ಸಂಸ್ಥೆಯ ಪ್ರಾಥಮಿಕ ಘಟಕವಾಗಿದೆ. ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿನ ಗ್ರಾಮದ ಮತದಾರರೆಲ್ಲರನ್ನೂ ತನ್ನ ಸದಸ್ಯರನ್ನಾಗಿ ಒಳಗೊಂಡ ನಿಕಾಯವೇ ಗ್ರಾಮಸಭೆ ಆಗಿರುತ್ತದೆ. ಇದು ವರ್ಷದಲ್ಲಿ ಕನಿಷ್ಠ ಎರಡು ಬಾರಿ ಸಭೆಯನ್ನು ನಡೆಸಬೇಕು. ಗ್ರಾಮಸಭೆಯನ್ನು ಗ್ರಾಮ ಪಂಚಾಯಿತಿ ಅಧ್ಯಕ್ಷರು ಕರೆಯುತ್ತಾರೆ. ಅಧ್ಯಕ್ಷರು ಗ್ರಾಮಸಭೆಯನ್ನು ಕರೆಯಲು ವಿಫಲವಾದರೆ ತಾಲ್ಲೂಕು ಪಂಚಾಯಿತಿಯ ಕಾರ್ಯನಿರ್ವಾಹಕ ಅಧಿಕಾರಿ (ಇ. ಓ.) ಸಭೆಯನ್ನು ಕರೆಯಬೇಕು. ಸಭೆಯ ಅಧ್ಯಕ್ಷತೆಯನ್ನು ಗ್ರಾಮ ಪಂಚಾಯಿತಿ ಅಧ್ಯಕ್ಷ ಅಥವಾ ಉಪಾಧ್ಯಕ್ಷ ಅಥವಾ ಮತದಾರರ ಸದಸ್ಯರಲ್ಲಿಯೇ ಒಬ್ಬರು ವಹಿಸಿಕೊಳ್ಳುತ್ತಾರೆ. ಸಭೆಯಲ್ಲಿ ಗ್ರಾಮಸ್ಥರು ತಮ್ಮ ಗ್ರಾಮದ ಸಮಸ್ಯೆಗಳನ್ನು, ಅವುಗಳನ್ನು ಪರಿಹರಿಸಲು ಕೈಗೊಂಡ ಕ್ರಮಗಳನ್ನು ಹಾಗೂ ಮುಂದೆ ಕೈಗೊಳ್ಳಬೇಕಾದ ಕ್ರಮಗಳ ಬಗ್ಗೆ ಚರ್ಚಿಸುತ್ತಾರೆ. ಗ್ರಾಮಸ್ಥರಿಗೆ ಸಲಹೆ ನೀಡಲು ಅವಕಾಶವಿರುತ್ತದೆ. ಸರಕಾರದ ವಿವಿಧ ಯೋಜನೆಗಳಿಗೆ ಫಲಾನುಭವಿಗಳನ್ನು ಗುರುತಿಸುವ ಜವಾಬ್ದಾರಿಯು ಈ ಸಭೆಗೆ ಇರುತ್ತದೆ.



ಗ್ರಾಮ ಸಭೆ

*ಗ್ರಾಮ ಪಂಚಾಯಿತಿ:*

ಗ್ರಾಮ ಪಂಚಾಯಿತಿಗಳು ಸಾಮಾನ್ಯವಾಗಿ ಜನಸಂಖ್ಯೆಯ ಆಧಾರದ ಮೇಲೆ ರಚಿತಗೊಳ್ಳುತ್ತವೆ. ಒಟ್ಟು 5000 ದಿಂದ 7000 ಜನಸಂಖ್ಯೆಗಳಿರುವ ಗ್ರಾಮ ಅಥವಾ ಗ್ರಾಮಗಳು ಸಮೂಹಕ್ಕೆ ಗ್ರಾಮ ಪಂಚಾಯಿತಿ ರಚಿಸಲಾಗುತ್ತದೆ. ಮಲೆನಾಡು ಜಿಲ್ಲೆಗಳಲ್ಲಿ 2500 ಕ್ಕಿಂತ ಹೆಚ್ಚು ಜನಸಂಖ್ಯೆಗಳಿರುವ ಗ್ರಾಮ ಅಥವಾ ಗ್ರಾಮಗಳ ಸಮೂಹಕ್ಕೆ ಗ್ರಾಮ ಪಂಚಾಯಿತಿಯನ್ನು ರಚಿಸಿಲಾಗುತ್ತದೆ. ಗ್ರಾಮ ಪಂಚಾಯಿತಿಯ ಸದಸ್ಯರುಗಳು ತಮ್ಮ ಪಂಚಾಯಿತಿಯ ಮಿತಿಗೊಳಪಟ್ಟ ಪ್ರದೇಶದಲ್ಲಿನ ವಯಸ್ಕ ಮತದಾರರಿಂದ ಚುನಾವಣೆಯಲ್ಲಿ ಆಯ್ಕೆಗೊಳ್ಳುತ್ತಾರೆ. ಪ್ರತಿ 400 ಜನಸಂಖ್ಯೆಗೆ ಒಬ್ಬ ಪ್ರತಿನಿಧಿಯನ್ನು ಆಯ್ಕೆ ಮಾಡಲಾಗುತ್ತದೆ. ಈ ಗ್ರಾಮಪಂಚಾಯಿತಿಗಳಲ್ಲಿ ಪರಿಶಿಷ್ಟಜಾತಿ, ಪರಿಶಿಷ್ಟಪಂಗಡ, ಹಿಂದುಳಿದ ವರ್ಗ ಮತ್ತು ಮಹಿಳೆಯರಿಗೆ ಮೀಸಲು ಸ್ಥಾನಗಳಿವೆ. ಗ್ರಾಮ ಪಂಚಾಯಿತಿಯ ಆಡಳಿತಾವಧಿ ಮೊದಲ ಸಭೆಯ ದಿನದಿಂದ ಆರಂಭಗೊಂಡು ಪೂರ್ಣ ಐದು ವರ್ಷಗಳವರೆಗೆ ಇರುತ್ತದೆ.

**ಕರ್ನಾಟಕದ ಪಂಚಾಯತ್ ರಾಜ್ ನ ನಕ್ಷೆ**




## ನಿಮಗಿದು ತಿಳಿದಿರಲಿ:

2000 ರದ ಪಂಚಾಯತ್ ರಾಜ್ ಕಾಯ್ದೆಯ ಎರಡನೇ ತಿದ್ದುಪಡಿಯ ಪ್ರಕಾರ ಪ್ರತಿ ಪಂಚಾಯಿತಿ ಸದಸ್ಯರು ಕಡ್ಡಾಯವಾಗಿ ತಮ್ಮ ಮನೆಗಳಲ್ಲಿ ಶೌಚಾಲಯವನ್ನು ಹೊಂದಿರಬೇಕು. ಒಂದು ವೇಳೆ ಇಲ್ಲದಿದ್ದಲ್ಲಿ ಚುನಾಯಿತರಾದ ಒಂದು ವರ್ಷದೊಳಗೆ ಶೌಚಾಲಯವನ್ನು ನಿರ್ಮಿಸಿಕೊಳ್ಳಲೇಬೇಕು.

ಪಂಚಾಯಿತಿ ಸಾಮಾನ್ಯ ಸಭೆಗಳು ಕನಿಷ್ಠ ತಿಂಗಳಿಗೊಮ್ಮೆ ನಡೆಯಬೇಕು ಹಾಗೂ ಸಭೆಯನ್ನು ನಡೆಸಲು ಕೋರಂ ಒಟ್ಟು ಸದಸ್ಯರ ಕನಿಷ್ಠ ಅರ್ಧದಷ್ಟು ಇರಬೇಕು. ಗ್ರಾಮ ಪಂಚಾಯಿತಿಯ ಸದಸ್ಯರುಗಳು ಬಹುಮತದ ಮೂಲಕ ಅಧ್ಯಕ್ಷ ಮತ್ತು ಉಪಾಧ್ಯಕ್ಷರನ್ನು ಆಯ್ಕೆ ಮಾಡುತ್ತಾರೆ. ಅವರ ಅಧಿಕಾರವಧಿ ಐದು ವರ್ಷಗಳು ಅಥವಾ ಗ್ರಾಮ ಪಂಚಾಯಿತಿ ಸದಸ್ಯತ್ವ ನಿಂತು ಹೋಗುವವರೆಗೆ ಇವುಗಳಲ್ಲಿ ಪ್ರಥಮವಾಗುವುದನ್ನು ಪರಿಗಣಿಸಲಾಗುತ್ತದೆ.

ಚುನಾಯಿತ ಅಧ್ಯಕ್ಷ ಗ್ರಾಮ ಪಂಚಾಯಿತಿ ಸಭೆಗಳ ಅಧ್ಯಕ್ಷತೆ ವಹಿಸುತ್ತಾರೆ. ಅಧ್ಯಕ್ಷರ ಅನುಪಸ್ಥಿತಿಯಲ್ಲಿ ಉಪಾಧ್ಯಕ್ಷರು ಸಭೆಯ ಅಧ್ಯಕ್ಷತೆ ವಹಿಸುತ್ತಾರೆ. ಅಧ್ಯಕ್ಷ, ಉಪಾಧ್ಯಕ್ಷ ಸ್ಥಾನಗಳಿಗೆ ಮೀಸಲಾತಿನಿಯಮ ಅನ್ವಯವಾಗುತ್ತದೆ. ಗ್ರಾಮ ಪಂಚಾಯಿತಿಗಳು ಪರಿಣಾಮಕಾರಿ ಆಡಳಿತಕ್ಕಾಗಿ ಸ್ಥಾಯಿಸಮಿತಿಗಳನ್ನು ರಚಿಸಿಕೊಳ್ಳುತ್ತವೆ.

ಗ್ರಾಮ ಪಂಚಾಯಿತಿಯ ಕಾರ್ಯಪಾಲನೆಗಾಗಿ ಪೂರ್ಣಾವಧಿಯ ಪಂಚಾಯತ್ ಅಭಿವೃದ್ಧಿ ಅಧಿಕಾರಿ (ಪಿ. ಡಿ. ಓ.) ಯನ್ನು ನೇಮಿಸಲಾಗುತ್ತದೆ. ಇವರನ್ನು ಇತ್ತೀಚೆಗೆ ಕರ್ನಾಟಕ ಪರೀಕ್ಷಾ ಪ್ರಾಧಿಕಾರದ ಮುಖಾಂತರ ರಾಜ್ಯ ಸರ್ಕಾರ ನೇಮಕ ಮಾಡುತ್ತದೆ.

### ತಾಲ್ಲೂಕು ಪಂಚಾಯಿತಿಗಳು:

1993 ರ ಪಂಚಾಯಿತಿ ರಾಜ್ ಕಾಯಿದೆಯು ತಾಲ್ಲೂಕುಗಳಲ್ಲಿ ತಾಲ್ಲೂಕು ಪಂಚಾಯಿತಿಗಳನ್ನು ರಚಿಸಲು ಅವಕಾಶ ಕಲ್ಪಿಸಿದೆ. ತಾಲ್ಲೂಕು ಪಂಚಾಯಿತಿಯು ಚುನಾಯಿತರಾದ ಸದಸ್ಯರುಗಳನ್ನು ಹೊಂದಿರುತ್ತದೆ. ಚುನಾಯಿತ ಸದಸ್ಯರು ಪ್ರತ್ಯಕ್ಷ ಚುನಾವಣೆಗಳ ಮೂಲಕ ಅರ್ಹ ಮತದಾರರಿಂದ ಆಯ್ಕೆಗೊಳ್ಳುತ್ತಾರೆ. ತಾಲ್ಲೂಕು ಪಂಚಾಯಿತಿಯ ಸದಸ್ಯರುಗಳ ಸಂಖ್ಯೆಯು ಆಯಾ ತಾಲ್ಲೂಕಿನ ಒಟ್ಟು ಜನ ಸಂಖ್ಯೆಯನ್ನು ಅವಲಂಬಿಸಿದ್ದು, ಪ್ರತಿ 12,500 ರಿಂದ 15,000 ಜನಸಂಖ್ಯೆಗೊಬ್ಬರಂತೆ ತಾಲ್ಲೂಕು ಪಂಚಾಯಿತಿಯು ಸದಸ್ಯರನ್ನು ಹೊಂದಿರುತ್ತದೆ. ಸದಸ್ಯ ಸ್ಥಾನ ಹಂಚಿಕೆಯಲ್ಲಿ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಹಿಂದುಳಿದ ವರ್ಗಗಳು ಮತ್ತು ಮಹಿಳಾ ಮೀಸಲಾತಿಯನ್ನು ಕೂಡ ಅನುಪಾಲನೆ ಮಾಡಬೇಕಾಗುತ್ತದೆ. ತಾಲ್ಲೂಕು ಪಂಚಾಯಿತಿಯ ಸದಸ್ಯರುಗಳ ಅಧಿಕಾರವಧಿಯು ಐದು ವರ್ಷಗಳಾಗಿದ್ದು, ಸಂದರ್ಭ ಬಂದಾಗ ಅಧ್ಯಕ್ಷರಿಗೆ ರಾಜೀನಾಮೆ ನೀಡಬಹುದಾಗಿದೆ ಅಥವಾ ಸರ್ಕಾರ ಅವರನ್ನು ವಜಾಗೊಳಿಸುವ ಅಧಿಕಾರವನ್ನು ಹೊಂದಿದೆ. ತಾಲ್ಲೂಕಿನ ಚುನಾಯಿತ ಪ್ರದೇಶವನ್ನು ಪೂರ್ಣ ಅಥವಾ ಭಾಗಶಃ ಪ್ರತಿನಿಧಿಸುವ ವಿಧಾನಸಭೆ ಮತ್ತು ಲೋಕಸಭೆ ಸದಸ್ಯರುಗಳು ಹಾಗೂ ತಾಲ್ಲೂಕಿನ ಮತದಾರರ ಪಟ್ಟಿಯಲ್ಲಿ ಹೆಸರು ನೋಂದಾಯಿತವಾಗಿರುವ ವಿಧಾನ ಪರಿಷತ್ತಿನ ಮತ್ತು ರಾಜ್ಯಸಭೆಯ ಸದಸ್ಯರು ತಾಲ್ಲೂಕು ಪಂಚಾಯಿತಿ ಸದಸ್ಯರಾಗಿರುತ್ತಾರೆ. ಇದರ ಜೊತೆಗೆ ಆಯಾ ತಾಲ್ಲೂಕಿನ ವ್ಯಾಪ್ತಿಗೊಳಪಡುವ ಗ್ರಾಮ ಪಂಚಾಯಿತಿಗಳ ಐದನೇ ಒಂದರಷ್ಟು ಅಧ್ಯಕ್ಷರುಗಳು ತಾಲೂಕು ಪಂಚಾಯಿತಿಯ ಸದಸ್ಯರಾಗಿ ಸೇವೆ ಸಲ್ಲಿಸುತ್ತಾರೆ. ಇವರುಗಳನ್ನು ಲಾಟರಿ ಮೂಲಕ ಆಯ್ಕೆ ಮಾಡಲಾಗುತ್ತದೆ. ಹಾಗೂ ಇವರ ಅವಧಿಯು ಒಂದು ವರ್ಷಕ್ಕೆ ಸೀಮಿತವಾಗಿರುತ್ತದೆ. ಇವರ ಆಯ್ಕೆಯು ಪರ್ಯಾನುಕ್ರಮದ (Rotation Base) ಅನುಸಾರ ನಡೆಯುತ್ತದೆ. ಇವರು ಅಧ್ಯಕ್ಷ, ಉಪಾಧ್ಯಕ್ಷರನ್ನು ಆಯ್ಕೆ ಮಾಡುವ ಹಾಗೂ ಅವಿಶ್ವಾಸ ನಿರ್ಣಯದ ಮೂಲಕ ತೆಗೆದು ಹಾಕುವ ಸಭೆಗಳನ್ನು ಹೊರತುಪಡಿಸಿ ಇನ್ನುಳಿದ ಎಲ್ಲ ಸಭೆಗಳಲ್ಲಿ ಭಾಗವಹಿಸುವ ಹಾಗೂ ಚರ್ಚಿಸುವ ಮತ್ತು ಮತ ನೀಡುವ ಹಕ್ಕನ್ನು ಹೊಂದಿರುತ್ತಾರೆ.

ತಾಲ್ಲೂಕು ಪಂಚಾಯಿತಿ ಸಾಮಾನ್ಯಸಭೆಗಳು ಕನಿಷ್ಠಪಕ್ಷ ಎರಡು ತಿಂಗಳಿಗೊಮ್ಮೆ ನಡೆಸಬೇಕು. ವಿಶೇಷಸಭೆಯನ್ನು ನಡೆಸಬಹುದಾಗಿದೆ. ತಾಲ್ಲೂಕು ಪಂಚಾಯಿತಿಯ ಅಧ್ಯಕ್ಷರು ಸಭೆಗಳ ಅಧ್ಯಕ್ಷತೆಯನ್ನು ವಹಿಸತಕ್ಕದ್ದು ಹಾಗೂ ಅವರ ಅನುಪಸ್ಥಿತಿಯಲ್ಲಿ ಉಪಾಧ್ಯಕ್ಷರು ಸಭೆಯ ಅಧ್ಯಕ್ಷತೆ ವಹಿಸಿಕೊಳ್ಳುತ್ತಾರೆ. ತಾಲ್ಲೂಕು ಪಂಚಾಯಿತಿಯ ಅಧ್ಯಕ್ಷರು ಮತ್ತು ಉಪಾಧ್ಯಕ್ಷರುಗಳನ್ನು ಸದಸ್ಯರು ಬಹುಮತದ ಮೂಲಕ ಆಯ್ಕೆ ಮಾಡಿಕೊಳ್ಳುತ್ತಾರೆ. ಇವರ ಅಧಿಕಾರಾವಧಿ ಐದು ವರ್ಷಗಳು ಅಥವಾ ತಾಲ್ಲೂಕು ಪಂಚಾಯಿತಿಯ ಸದಸ್ಯತ್ವ ನಿಂತು ಹೋಗುವವರೆಗೆ ಇವುಗಳಲ್ಲಿ ಪ್ರಥಮವಾಗುವುದನ್ನು ಪರಿಗಣಿಸಲಾಗುತ್ತದೆ. ತಾಲ್ಲೂಕು ಪಂಚಾಯಿತಿಗಳ ಆಡಳಿತದ ಪರಿಣಾಮಕಾರಿ ನಿರ್ವಹಣೆಗಾಗಿ ಸ್ಥಾಯಿಸಮಿತಿಗಳನ್ನು ರಚಿಸಿಕೊಳ್ಳುತ್ತವೆ. ಸರ್ಕಾರವು ಸುಗಮ ಆಡಳಿತ ನಿರ್ವಹಣೆಗಾಗಿ ಕಾರ್ಯನಿರ್ವಾಹಕ ಅಧಿಕಾರಿಗಳನ್ನು ನೇಮಿಸುತ್ತದೆ. ತಾಲ್ಲೂಕು ಪಂಚಾಯಿತಿಗಳು ಸ್ಥಳೀಯ ಸಂಸ್ಥೆಗಳ ಕಾರ್ಯಗಳೊಂದಿಗೆ ಇನ್ನೂ ಕೆಲವು ಕಾರ್ಯಗಳನ್ನು ನಿರ್ವಹಿಸಬೇಕಾಗುತ್ತದೆ, ಅವುಗಳೆಂದರೆ;

1. ಗ್ರಾಮಪಂಚಾಯಿತಿಗಳ ವಾರ್ಷಿಕ ಯೋಜನಾ ಪ್ರಸ್ತಾವನೆಗಳನ್ನು ಕ್ರೋಡೀಕರಿಸಿ ಜಿಲ್ಲಾ ಪಂಚಾಯತಿಗಳಿಗೆ ಸಲ್ಲಿಸುವುದು.
2. ರಾಜ್ಯ ಸರ್ಕಾರ ಅಥವಾ ಜಿಲ್ಲಾಪಂಚಾಯಿತಿಗಳು ಸೂಚಿಸುವ ಎಲ್ಲಾ ಕಲ್ಯಾಣದಾಯಕ ಕಾರ್ಯಕ್ರಮ ಅಥವಾ ಯೋಜನೆಗಳನ್ನು ಕಾರ್ಯಗತಗೊಳಿಸುವುದು.

### *ಜಿಲ್ಲಾ ಪಂಚಾಯಿತಿಗಳು:*

ಜಿಲ್ಲೆಯ ಗ್ರಾಮೀಣ ಆಡಳಿತವನ್ನು ನೋಡಿಕೊಳ್ಳಲು ಪ್ರತಿ ಜಿಲ್ಲೆಯಲ್ಲೂ ಜಿಲ್ಲಾ ಪಂಚಾಯಿತಿಗಳನ್ನು ಸ್ಥಾಪಿಸಲಾಗುತ್ತಿದೆ ಹಾಗೂ ಜಿಲ್ಲಾಡಳಿತವನ್ನು ಈ ಹಿಂದೆ ಜಿಲ್ಲಾ ಮಂಡಳಿಗಳು ಅಥವಾ ಸಮಿತಿಗಳೆಂದು ಕರೆಯಲಾಗುತ್ತಿತ್ತು. ಜಿಲ್ಲಾ ಪಂಚಾಯಿತಿ ಸದಸ್ಯರು ನೇರವಾಗಿ ಅಥವಾ ಪ್ರತ್ಯಕ್ಷವಾಗಿ ಆ ಜಿಲ್ಲೆಯ ಜನರಿಂದ ಚುನಾಯಿತರಾಗುತ್ತಾರೆ. ಜನಸಂಖ್ಯಾ ಆಧಾರದ ಮೇಲೆ ಜಿಲ್ಲೆಗಳ ಪ್ರತಿನಿಧಿಗಳ ಸಂಖ್ಯೆಯಲ್ಲಿ ವ್ಯತ್ಯಾಸ ಕಂಡುಬರುತ್ತದೆ. ಕೊಡಗು ಜಿಲ್ಲೆಯಲ್ಲಿ 18,000 ಜನಸಂಖ್ಯೆಗೆ ಒಬ್ಬ ಸದಸ್ಯರನ್ನು ಬೆಂಗಳೂರು ನಗರ ಜಿಲ್ಲೆಯಲ್ಲಿ 20,000 ಜನಸಂಖ್ಯೆಗೆ ಒಬ್ಬ ಸದಸ್ಯರನ್ನು ಚಿಕ್ಕಮಗಳೂರು ಮತ್ತು ಉತ್ತರಕನ್ನಡ ಜಿಲ್ಲೆಗಳಲ್ಲಿ 30,000 ಜನಸಂಖ್ಯೆಗೆ ಒಬ್ಬ ಸದಸ್ಯರನ್ನು ಹಾಗೂ ಉಳಿದೆಲ್ಲಾ ಜಿಲ್ಲೆಗಳಲ್ಲಿ 35,000 ದಿಂದ 45,000 ಜನಸಂಖ್ಯೆಗೆ ಒಬ್ಬ ಸದಸ್ಯರನ್ನು ಆಯ್ಕೆ ಮಾಡಲಾಗುತ್ತದೆ. ಜಿಲ್ಲಾ ಪಂಚಾಯಿತಿಯಲ್ಲಿ ಪರಿಶಿಷ್ಟಜಾತಿ, ಪರಿಶಿಷ್ಟ ಪಂಗಡ, ಹಿಂದುಳಿದ ವರ್ಗ ಮತ್ತು ಮಹಿಳಾ ಮೀಸಲಾತಿ ಅನ್ವಯವಾಗುತ್ತದೆ. ಜಿಲ್ಲಾಪಂಚಾಯಿತಿ ಸದಸ್ಯರ ಅವಧಿ ಐದು ವರ್ಷಗಳಾಗಿರುತ್ತದೆ.

ಜಿಲ್ಲಾ ಪಂಚಾಯಿತಿಯಲ್ಲಿ ಅಧ್ಯಕ್ಷ, ಉಪಾಧ್ಯಕ್ಷರ ಅಧಿಕಾರಾವಧಿ ಐದು ವರ್ಷಗಳು ಅಥವಾ ಜಿಲ್ಲಾಪಂಚಾಯಿತಿ ಸದಸ್ಯತ್ವ ನಿಂತು ಹೋಗುವವರೆಗೆ ಇವುಗಳಲ್ಲಿ

ಪ್ರಥಮವಾಗುವುದನ್ನು ಪರಿಗಣಿಸಲಾಗುತ್ತದೆ. ಜಿಲ್ಲಾ ಪಂಚಾಯಿತಿಗಳು ಕನಿಷ್ಠ ಎರಡು ತಿಂಗಳಿಗೊಮ್ಮೆ ಸಭೆ ನಡೆಸಬೇಕು ಮತ್ತು ಈ ಸಭೆಗಳ ಅಧ್ಯಕ್ಷತೆಯನ್ನು ಅಧ್ಯಕ್ಷರು ವಹಿಸುತ್ತಾರೆ. ಅವರ ಅನುಪಸ್ಥಿತಿಯಲ್ಲಿ ಉಪಾಧ್ಯಕ್ಷರು ವಹಿಸುತ್ತಾರೆ. ಇವರಿಬ್ಬರ ಅನುಪಸ್ಥಿತಿಯಲ್ಲಿ ಸದಸ್ಯರಲ್ಲಿಯೇ ಒಬ್ಬರು ಅಧ್ಯಕ್ಷತೆಯನ್ನು ವಹಿಸಿತ್ತಾರೆ. ಪ್ರಾಕೃತಿಕ ವಿಕೋಪಗಳು ಸಂಭವಿಸಿದಾಗ ವಾರ್ಷಿಕವಾಗಿ ಅಧ್ಯಕ್ಷರು ಐದು ಲಕ್ಷ ರೂಪಾಯಿಗಳನ್ನು ವೆಚ್ಚ ಮಾಡುವ ಅಧಿಕಾರ ಹೊಂದಿರುತ್ತಾರೆ. ಜಿಲ್ಲಾ ಪಂಚಾಯಿತಿಯ ಸಮರ್ಥ ಆಡಳಿತ ದೃಷ್ಟಿಯಿಂದ ಐದು ಸ್ಥಾಯಿ ಸಮಿತಿಗಳನ್ನು ರಚಿಸಿಕೊಳ್ಳಲಾಗುತ್ತದೆ. ಜಿಲ್ಲಾಧಿಕಾರಿಗಳಿಗೆ ಸಮಾನವಾದ ಅಧಿಕಾರಿಯನ್ನು ಜಿಲ್ಲಾ ಪಂಚಾಯಿತಿಯ ಮುಖ್ಯ ಕಾರ್ಯ ನಿರ್ವಹಣಾಧಿಕಾರಿ (CEO) ಯನ್ನಾಗಿ ರಾಜ್ಯ ಸರ್ಕಾರ ನೇಮಿಸುತ್ತದೆ. ಈ ಅಧಿಕಾರಿಯು ಜಿಲ್ಲಾ ಪಂಚಾಯಿತಿಯ ಸಭೆಯಲ್ಲಿ, ಚರ್ಚೆಗಳಲ್ಲಿ ಭಾಗವಹಿಸುವ ಅಧಿಕಾರ ಹೊಂದಿದ್ದರೂ. ಮತ ಚಲಾಯಿಸುವ ಹಕ್ಕು ಇರುವುದಿಲ್ಲ. ಜಿಲ್ಲಾ ಪಂಚಾಯಿತಿಕಾರ್ಯ ನಿರ್ವಹಣಾ ಅಧಿಕಾರವನ್ನೂ ಇವರು ಹೊಂದಿರುತ್ತಾರೆ.

ಜಿಲ್ಲಾ ಪಂಚಾಯಿತಿಯು ಅಭಿವೃದ್ಧಿ ಕಾರ್ಯಗಳನ್ನು ಮತ್ತು ಜನಪ್ರಿಯ ಕಲ್ಯಾಣ ಯೋಜನೆಗಳನ್ನು ಕಾರ್ಯಗತಗೊಳಿಸುವ ಎಲ್ಲಾ ಅಧಿಕಾರವು ಜಿಲ್ಲಾ ಪಂಚಾಯಿತಿಗಿದೆ. ರಾಜ್ಯ ಸರ್ಕಾರದ ಎಲ್ಲಾ ಅಭಿವೃದ್ಧಿ ಕಾರ್ಯಕ್ರಮಗಳು ಮತ್ತು ಕಲ್ಯಾಣ ಯೋಜನೆಗಳು ಜಿಲ್ಲಾ ಪಂಚಾಯಿತಿಯ ಮೂಲಕವೇ ಅನುಷ್ಠಾನಗೊಳ್ಳುತ್ತವೆ. ಇವುಗಳ ಜೊತೆಗೆ ಜಿಲ್ಲಾ ಪಂಚಾಯಿತಿಯು ಕೆಳಗಿನ ಕಾರ್ಯಗಳನ್ನು ನಿರ್ವಹಿಸುತ್ತದೆ.

1. ಸರ್ಕಾರದ ಯೋಜನೆಗಳು ಹಾಗೂ ಕಾರ್ಯಕ್ರಮಗಳ ಯಶಸ್ವಿ ಅನುಷ್ಠಾನಕ್ಕಾಗಿ ಜಿಲ್ಲಾಪಂಚಾಯಿತಿ, ತಾಲ್ಲೂಕು ಪಂಚಾಯಿತಿ ಮತ್ತು ಗ್ರಾಮಪಂಚಾಯಿತಿಗಳ ನಡುವೆ ಪರಸ್ಪರ ನಂಬಿಕೆ, ವಿಶ್ವಾಸ, ಮತ್ತು ಸಹಕಾರ ಭಾವನೆಯ ವಾತಾವರಣವನ್ನು ಸೃಷ್ಟಿಸುವುದಾಗಿದೆ.
2. ಯೋಜನೆಗಳು ಮತ್ತು ಅಭಿವೃದ್ಧಿ ಕಾರ್ಯಗಳನ್ನು ಯಶಸ್ವಿಗೊಳಿಸಲು ಜಿಲ್ಲೆಯ ಎಲ್ಲಾ ಇಲಾಖೆಗಳ ಜೊತೆಗೆ ಸಹಕರಿಸಿ ಸಮನ್ವಯತೆ ಹೊಂದುವುದು.
3. ಜಿಲ್ಲೆಯಲ್ಲಿ ಸಹಕಾರಿ ಸಂಘಗಳು, ಸಹಕಾರಿ ಬ್ಯಾಂಕ್‌ಗಳು ಹಾಗೂ ಇನ್ನಿತರೆ ಸಹಕಾರಿ ಸಂಸ್ಥೆಗಳನ್ನು ಸ್ಥಾಪಿಸಿ ಅವುಗಳು ಕಾರ್ಯ ನಿರ್ವಹಿಸಿಕೊಂಡು ಹೋಗಲು ಪ್ರೋತ್ಸಾಹ ಮತ್ತು ಬೆಂಬಲ ಒದಗಿಸುವುದು.
4. ರಾಜ್ಯ-ಸರ್ಕಾರದ ನಿರ್ದೇಶನದಂತೆ ಕೆಲಸಗಳನ್ನು ಕಾರ್ಯರೂಪಕ್ಕೆ ತರುವುದು.

**ನಿಮಗಿದು ತಿಳಿದಿರಲಿ:**

1993 ರ ಪಂಚಾಯತ್ ರಾಜ್ ಕಾಯಿದೆಯ ಪ್ರಕಾರ ಸ್ಥಳೀಯ ಸಂಸ್ಥೆಗಳಿಗೆ ಚುನಾವಣೆ ನಡೆಸಲು ರಾಜ್ಯಮಟ್ಟದಲ್ಲಿ ಪ್ರತ್ಯೇಕ ಚುನಾವಣಾ ಆಯೋಗವನ್ನು ಸ್ಥಾಪಿಸಲಾಗಿದೆ. ಹೀಗೆ ಸ್ಥಾಪಿತಗೊಂಡ ಚುನಾವಣಾ ಆಯೋಗವು ಕರ್ನಾಟಕದಲ್ಲಿ ಜಿಲ್ಲಾ

ಪಂಚಾಯಿತಿ, ತಾಲ್ಲೂಕು ಪಂಚಾಯಿತಿ ಮತ್ತು ಗ್ರಾಮ ಪಂಚಾಯಿತಿಗಳಿಗೆ ಮತ್ತು ಪೌರ ಸಂಸ್ಥೆಗಳಿಗೆ ಚುನಾವಣೆಗಳನ್ನು ನಡೆಸುತ್ತದೆ.

## ನಗರ ಸ್ಥಳೀಯ ಸಂಸ್ಥೆಗಳು:

ರಾಜ್ಯದಲ್ಲಿ ಹಲವಾರು ನಗರ ಮತ್ತು ಪಟ್ಟಣಗಳಿದ್ದು ಇವುಗಳನ್ನು ನಗರ ಪ್ರದೇಶಗಳೆಂದು ಗುರುತಿಸಲಾಗಿದೆ. ಈ ನಗರ ಪ್ರದೇಶಗಳ ಜನರು ಶಿಕ್ಷಣ, ಆರೋಗ್ಯ, ಸಾರಿಗೆ, ಕುಡಿಯುವನೀರು, ನೈರ್ಮಲೀಕರಣ, ಮನರಂಜನೆ, ಇತ್ಯಾದಿಯಾದ ಉತ್ತಮ ಸವಲತ್ತುಗಳನ್ನು ಹೊಂದಿರುವುದರ ಜೊತೆಗೆ ಅನೇಕ ಸಮಸ್ಯೆಗಳನ್ನು ಹೊಂದಿರುತ್ತಾರೆ. ಈ ನಗರವಾಸಿಗಳ ಸಮಸ್ಯೆಗಳಿಗೆ ಪರಿಹಾರ ಒದಗಿಸುವ ಸಲುವಾಗಿ ನಗರಸ್ಥಳೀಯ ಸಂಸ್ಥೆಗಳು ಅಥವಾ ನಗರ ಸ್ಥಳೀಯ ಸ್ವಯಂ ಸರ್ಕಾರಗಳನ್ನು ರಚಿಸಿಕೊಳ್ಳಲಾಗಿದೆ.

**ನಗರ ಸ್ಥಳೀಯ ಸಂಸ್ಥೆಗಳಲ್ಲಿ ಮೂರು ಬಗೆ ಅವುಗಳೆಂದರೆ:**

1. ನಗರ ಪಾಲಿಕೆ (ಮಹಾನಗರ ಪಾಲಿಕೆ)- ಪ್ರಮುಖ ನಗರಗಳು.
2. ನಗರ ಸಭೆಗಳು ಅಥವಾ ಪುರಸಭೆಗಳು- ನಗರ ಪಟ್ಟಣಗಳು.
3. ದಂಡು ಪ್ರದೇಶದ ಭಾಗ- ರಕ್ಷಣಾ ಪಡೆಯ ಹಿಡಿತದಲ್ಲಿರುವ ಪ್ರದೇಶ

ಜನಸಂಖ್ಯೆ, ವರಮಾನ, ಸಾಮಾಜಿಕ ಸ್ಥಿತಿಗತಿಗಳ ಆಧಾರದ ಮೇಲೆ ರಾಜ್ಯ ಸರ್ಕಾರವು ಪ್ರದೇಶವೊಂದನ್ನು ನಗರ ಅಥವಾ ಪಟ್ಟಣವೆಂದು ಘೋಷಿಸುವ ಅಧಿಕಾರ ಹೊಂದಿದೆ. ನಗರದ ಸ್ಥಳೀಯ ಸಂಸ್ಥೆಗಳ ಕಾರ್ಯಗಳು ಹಲವಾರಿದ್ದು ಅವುಗಳಲ್ಲಿ ಪ್ರಮುಖವಾದವುಗಳೆಂದರೆ:

1. ಆಯ-ವ್ಯಯ ಪಟ್ಟಿ ತಯಾರಿಸಿ ಮಂಡಳಿಯಿಂದ ಅನುಮೋದನೆ ಪಡೆಯುವುದು.
2. ನಗರ ಅಥವಾ ಪಟ್ಟಣದ ಸಂಪೂರ್ಣ ಆಡಳಿತ ನೋಡಿಕೊಳ್ಳುವುದು.
3. ಉತ್ತಮ ನಗರ ಯೋಜನೆಯನ್ನು ತಯಾರಿಸಿ ಕಾರ್ಯರೂಪಕ್ಕೆ ತರುವುದು.
4. ಉತ್ತಮವಾದ ರಸ್ತೆ, ಸಾರಿಗೆ ವ್ಯವಸ್ಥೆ, ನೀರು ಸರಬರಾಜು, ಶಿಕ್ಷಣ, ವಿದ್ಯುಚ್ಛಕ್ತಿ, ಮಾರುಕಟ್ಟೆ, ಆರೋಗ್ಯ ಹಾಗೂ ಇನ್ನಿತರೆ ಸವಲತ್ತುಗಳನ್ನು ಉತ್ತಮ ರೀತಿಯಲ್ಲಿ ಒದಗಿಸುವುದು.
5. ನಗರಗಳಲ್ಲಿ ಒಳಚರಂಡಿ ವ್ಯವಸ್ಥೆ ಮತ್ತು ಘನತ್ಯಾಜ್ಯ ವಸ್ತುಗಳ ವಿಲೇವಾರಿಗೆ ಸೌಕರ್ಯ ಕಲ್ಪಿಸಿ ಸ್ವಚ್ಛತೆ ಕಾಪಾಡುವುದು.

6. ಕಟ್ಟಡ ನಿರ್ಮಾಣಕ್ಕೆ ಪರವಾನಗಿ ನೀಡುವುದು, ನಗರ ಸಭೆಯ ಕಟ್ಟಡಗಳು ಹಾಗೂ ಆಸ್ತಿಯನ್ನು ರಕ್ಷಿಸುವುದು.
7. ಜನನ ಮರಣಗಳ ನೋಂದಣಿ ಮಾಡಿಕೊಳ್ಳುವುದು.
8. ಕ್ರೀಡಾಂಗಣ, ಮನರಂಜನಾ ಮಂದಿರ, ಉದ್ಯಾನವನಗಳನ್ನು ನಿರ್ಮಿಸಿ ಅವುಗಳನ್ನು ನಿರ್ವಹಿಸುವುದು.
9. ನಗರದ ಕೊಳೆಗೇರಿ ವಾಸಿಗಳಿಗೆ ಸೌಕರ್ಯ ಒದಗಿಸುವುದರ ಮೂಲಕ ಅಲ್ಲಿನ ನಿವಾಸಿಗಳ ಜೀವನಮಟ್ಟ ಸುಧಾರಿಸುವಂತೆ ನೋಡಿಕೊಳ್ಳುವುದು.
10. ಮಕ್ಕಳ ಕಲ್ಯಾಣ ಕೇಂದ್ರಗಳು, ಬಾಲಾಪರಾಧಿ ಗೃಹಗಳು, ಭಿಕ್ಷುಕರ ಕಾಲೋನಿಗಳು, ಅನಾಥಾಶ್ರಮಗಳು, ಹೀಗೆ ಇತ್ಯಾದಿ ಸಹಾಯಕ ಕೇಂದ್ರಗಳನ್ನು ಸ್ಥಾಪಿಸಿ ನಿರ್ವಹಿಸಿಕೊಂಡು ಹೋಗುವುದು. ಈಜುಕೊಳ, ಕ್ರೀಡಾಂಗಣ, ಸಂಗ್ರಹಾಲಯ, ವಾಹನನಿಲ್ದಾಣ, ವಾಚನಾಲಯ, ಸಾರ್ವಜನಿಕ ಗ್ರಂಥಾಲಯ, ಪಶುವೈದ್ಯಾಲಯ, ಸಿನಿಮಾ ಮಂದಿರ, ಮಾರುಕಟ್ಟೆ ಪ್ರಾಂಗಣ, ಶವಾಗಾರ, ಮುಂತಾದ ಕಟ್ಟಡಗಳ ನಿರ್ಮಾಣ ಹಾಗೂ ನಿರ್ವಹಣಾ ಕಾರ್ಯಗಳನ್ನು ಮಾಡುವುದು.
11. ಮಳೆನೀರು ಕೊಯ್ಲುವಿಕೆಗೆ ಯೋಜನೆ ನಿರ್ಮಿಸಿ ಕಾರ್ಯಗತಗೊಳಿಸುವುದು.
12. ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಪ್ರೋತ್ಸಾಹಿಸುವುದು.
13. ನಗರದ ಹಿಂದುಳಿದವರ್ಗದವರ ಮತ್ತು ದುರ್ಬಲ ವರ್ಗದವರ ಸುಧಾರಣೆ ಮತ್ತು ಪ್ರಗತಿಗಾಗಿ ಕ್ರಮಕೈಗೊಳ್ಳುವುದು.
14. ನಗರ ಅಥವಾ ಪಟ್ಟಣವು ಸ್ವಚ್ಛ, ಸುಂದರ ಮತ್ತು ಹಸಿರಿನಿಂದ ಕಂಗೊಳಿಸಲು ಸೂಕ್ತ ಯೋಜನೆಗಳನ್ನು ಕೈಗೊಳ್ಳುವುದು.

## ವರಮಾನದ ಮೂಲಗಳು:

ನಗರ ಪ್ರದೇಶಗಳ ಅಭಿವೃದ್ಧಿ ಮತ್ತು ಪ್ರಗತಿಗಾಗಿ ಮತ್ತು ವಿವಿಧ ಯೋಜನೆಗಳನ್ನು ಕಾರ್ಯಗತಗೊಳಿಸಿಕೊಳ್ಳಲು ವರಮಾನದ ಅವಶ್ಯಕತೆಯಿದೆ. ನಗರ ಸಭೆಗಳ ಆದಾಯದ ಪ್ರಮುಖ ಮೂಲಗಳೆಂದರೆ ಕಟ್ಟಡ ತೆರಿಗೆಗಳು, ಖಾಲಿ ಸ್ಥಳದ ಮೇಲಿನ ತೆರಿಗೆ, ಅಂಗಡಿ ಮತ್ತು ಮಾರಾಟ ಮಾಡುವ ತಳ್ಳು ಗಾಡಿಗಳ ಮೇಲೆ ವಿಧಿಸುವ ತೆರಿಗೆ, ನೀರಿನ ತೆರಿಗೆ, ಜೊತೆಗೆ ನಗರ ಸಭೆಗಳ ಅಧೀನದ ಕಟ್ಟಡಗಳು, ಮಾರುಕಟ್ಟೆಗಳಲ್ಲಿನ ಮಳಿಗೆಗಳಿಂದ ಬರುವ ಬಾಡಿಗೆ ಹಾಗೂ ಮಾರಾಟ ಮತ್ತು ಮನರಂಜನಾ ಉಪಕರಣ ಇತ್ಯಾದಿಗಳಾಗಿವೆ. ರಾಜ್ಯ ಸರ್ಕಾರ ನೀಡುವ ಅನುದಾನದಿಂದ ನಗರ ಸಂಸ್ಥೆಗಳು ಕಲ್ಯಾಣ ಕಾರ್ಯಗಳನ್ನು ಕೈಗೊಳ್ಳುತ್ತವೆ.

## ನಗರ ಸ್ಥಳೀಯ ಸಂಸ್ಥೆಗಳ ಸಂರಚನೆ

1. **ನಗರ ಪಾಲಿಕೆಗಳು**
2. **ಮಹಾನಗರ ಪಾಲಿಕೆಗಳು**

### *ನಗರ ಪಾಲಿಕೆಗಳು:*

ನಗರ ಪ್ರದೇಶಗಳು ಜನಸಂಖ್ಯೆಯ ಆಧಾರವಾಗಿ ಪಟ್ಟಣ ಮತ್ತು ನಗರ ಪ್ರದೇಶಗಳೆಂದು ವರ್ಗೀಕರಿಸಲ್ಪಟ್ಟಿದ್ದು, 20 ರಿಂದ 50 ಸಾವಿರದೊಳಗಿನ ಜನಸಂಖ್ಯೆಯನ್ನು ಹೊಂದಿದ್ದರೆ, ಅದನ್ನು ಪಟ್ಟಣವೆಂದು ಪರಿಗಣಿಸಲಾಗುತ್ತದೆ. 50 ಸಾವಿರದಿಂದ 3 ಲಕ್ಷದೊಳಗಿನ ಜನಸಂಖ್ಯೆಯನ್ನು ಹೊಂದಿರುವ ಪ್ರದೇಶವನ್ನು ನಗರವೆಂತಲೂ ವರ್ಗೀಕರಿಸಲಾಗಿದೆ. ಪಟ್ಟಣದಲ್ಲಿ ಆಡಳಿತ ನಡೆಸುವ ಸಭೆಗೆ ಪುರಸಭೆ ಅಥವಾ ಪಟ್ಟಣಸಭೆ ಎಂದು ಕರೆದರೆ ನಗರದ ಆಡಳಿತದ ಮಂಡಳಿಗೆ ನಗರಸಭೆ ಎಂದು ಕರೆಯುತ್ತಾರೆ. ಪಟ್ಟಣ ಮತ್ತು ನಗರ ಸಭೆಗಳ ಸದಸ್ಯರುಗಳು ಪ್ರತ್ಯಕ್ಷ ಮತದಾನದ ಮೂಲಕ ಚುನಾಯಿತರಾಗಿ ಆಡಳಿತ ಮಂಡಲಿ ಸಭೆಯ ಸದಸ್ಯ ಅಥವಾ ಕೌನ್ಸಿಲರ್ (Councillor) ಎಂದು ಕರೆಸಿಕೊಳ್ಳುತ್ತಾರೆ. ಈ ಸದಸ್ಯರುಗಳ ಸಂಖ್ಯೆಯು ನಗರ ಅಥವಾ ಪಟ್ಟಣದ ಜನಸಂಖ್ಯೆಯನ್ನು ಆಧರಿಸುತ್ತದೆ. ಪುರಸಭೆಗಳಲ್ಲಿ ಸಾಧಾರಣವಾಗಿ 23 ರಿಂದ 27 ಸದಸ್ಯರಿದ್ದರೆ, ನಗರ ಸಭೆಗಳಲ್ಲಿ 31 ರಿಂದ 37 ಸದಸ್ಯರು ಇರುತ್ತಾರೆ. ಇದರ ಜೊತೆಗೆ ರಾಜ್ಯಸರ್ಕಾರವು ಐದು ಜನ ಸದಸ್ಯರುಗಳನ್ನು ಪುರಸಭೆ ಮತ್ತು ನಗರ ಸಭೆಗಳಿಗೆ ನಾಮ ನಿರ್ದೇಶನ ಮಾಡುತ್ತದೆ. ಈ ನಾಮನಿರ್ದೇಶಿತ ಸದಸ್ಯರುಗಳಿಗೆ ಸಭೆಯ ಚರ್ಚೆಯಲ್ಲಿ ಭಾಗವಹಿಸುವ ಹಕ್ಕಿದ್ದು ಮತಹಾಕುವ ಹಕ್ಕಿಲ್ಲ. ಸ್ಥಳೀಯ ವಿಧಾನಸಭಾ ಶಾಸಕರು, ವಿಧಾನಪರಿಷತ್ತು ಶಾಸಕರು ಮತ್ತು ಲೋಕಸಭಾ ಸದಸ್ಯರುಗಳು ಸಭೆಗಳಲ್ಲಿ ಭಾಗವಹಿಸುವ ಮತ್ತು ಮತ ಹಾಕುವ ಹಕ್ಕನ್ನು ಹೊಂದಿರುತ್ತಾರೆ. ನಗರ ಸ್ಥಳೀಯ ಸಂಸ್ಥೆಗಳಲ್ಲಿಯೂ ಸಹ ನಿಯಮಾನುಸಾರ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಹಿಂದುಳಿದ ವರ್ಗ ಮತ್ತು ಮಹಿಳಾ ಮೀಸಲಾತಿಯಿದೆ. ಸ್ಥಳೀಯ ಸಂಸ್ಥೆಯ ಅಧ್ಯಕ್ಷ ಮತ್ತು ಉಪಾಧ್ಯಕ್ಷರು ಆ ಸಂಸ್ಥೆಗಳ ಮುಖ್ಯಸ್ಥರಾಗಿರುತ್ತಾರೆ. ಇವರುಗಳನ್ನು ಆಯ್ಕೆಗೊಂಡ ಸದಸ್ಯರು ಚುನಾಯಿಸುತ್ತಾರೆ. ಅಧ್ಯಕ್ಷರು ಸಭೆಯ ಅಧ್ಯಕ್ಷತೆ ವಹಿಸಿ ಕಲಾಪಗಳು ಸುಗಮವಾಗಿ ನಡೆಯುವಂತೆ ನೋಡಿಕೊಳ್ಳುತ್ತಾರೆ. ಅಧ್ಯಕ್ಷರ ಗೈರು ಹಾಜರಿಯಲ್ಲಿ ಉಪಾಧ್ಯಕ್ಷರು ಈ ಜವಾಬ್ದಾರಿಯನ್ನು ನಿರ್ವಹಿಸಬೇಕಾಗುತ್ತದೆ. ನಗರ ಸ್ಥಳೀಯ ಸಂಸ್ಥೆಗಳ ಅಧಿಕಾರಾವಧಿಯು ಐದು ವರ್ಷಗಳಾಗಿದ್ದು ಕೆಲವು ವಿಶೇಷ ಸಂದರ್ಭಗಳಲ್ಲಿ ಅಧಿಕಾರಾವಧಿಯನ್ನು ಮುಂದುವರೆಸುವ ಹಕ್ಕನ್ನು ರಾಜ್ಯ ಸರ್ಕಾರ ಹೊಂದಿದೆ. ಸ್ಥಳೀಯ ಸಂಸ್ಥೆಗಳ ಸಮರ್ಥ ಆಡಳಿತದ ನಿರ್ವಹಣೆಗಾಗಿ ನಾಲ್ಕು ಸ್ಥಾಯಿಸಮಿತಿಗಳನ್ನು ರಚಿಸಿಕೊಳ್ಳಲಾಗುತ್ತದೆ. ರಾಜ್ಯ ಸರ್ಕಾರದಿಂದ ನೇಮಕಗೊಂಡ ಅಥವಾ ಮುಖ್ಯಾಧಿಕಾರಿ ಅಥವಾ ಚೀಫ್ ಆಫೀಸರ್ ಮುಖ್ಯ ಆಡಳಿತಾಧಿಕಾರಿಯಾಗಿ ಸ್ಥಳೀಯ ಸಂಸ್ಥೆಯ ಎಲ್ಲಾ ಕಾರ್ಯ ಚಟುವಟಿಕೆಗಳನ್ನು ನಿರ್ವಹಿಸಿಕೊಂಡು ಹೋಗುತ್ತಾನೆ.

*ಮಹಾನಗರ ಪಾಲಿಕೆಗಳು*

1976 ರ ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ ಕಾಯಿದೆ ಅನ್ವಯ ಮಹಾನಗರ ಪಾಲಿಕೆಗಳನ್ನು ರಚಿಸಲಾಗಿದೆ. ಎರಡು ಲಕ್ಷಕ್ಕಿಂತ ಹೆಚ್ಚು ಜನ ಸಂಖ್ಯೆ ಮತ್ತು ಕೋಟಿಗಿಂತಲೂ ಹೆಚ್ಚು ಆದಾಯವಿರುವ ನಗರ ಪ್ರದೇಶಗಳಲ್ಲಿ ಮಹಾನಗರ ಪಾಲಿಕೆಗಳನ್ನು ರಚಿಸಲಾಗಿದೆ. ನಗರ ಪಾಲಿಕೆಯ ಸದಸ್ಯರುಗಳು ಚುನಾವಣೆಗಳ ಮೂಲಕ ಚುನಾಯಿತರಾಗಿ ಪಾಲಿಕೆ ಸದಸ್ಯ (Corporator) ಎನಿಸಿಕೊಳ್ಳುತ್ತಾರೆ. ಈ ಸದಸ್ಯರುಗಳ ಸಂಖ್ಯೆ ಜನಸಂಖ್ಯೆ ಆಧಾರಿತವಾಗಿದ್ದು ಸಾಧಾರಣವಾಗಿ 30 ರಿಂದ 100 ರವರೆಗೆ ಇರುತ್ತದೆ. ಪಾಲಿಕೆ ಗಾತ್ರವನ್ನು ಸರ್ಕಾರ ನಿರ್ಧರಿಸುತ್ತದೆ.

ನಗರವು ಚಿಕ್ಕಚಿಕ್ಕ ಚುನಾವಣಾ ವಿಭಾಗಗಳಾಗಿ ವಿಂಗಡಣೆಗೊಂಡು ಬಡಾವಣೆ ಅಥವಾ ವಾರ್ಡ್ ಎಂದು ಕರೆಯಲ್ಪಟ್ಟಿವೆ. ಪ್ರತಿ ವಾರ್ಡಿನಿಂದ ಒಬ್ಬ ಪಾಲಿಕೆ ಸದಸ್ಯ ಚುನಾಯಿತನಾಗುತ್ತಾನೆ. ಈ ಸದಸ್ಯರುಗಳು ಪ್ರತ್ಯಕ್ಷವಾದ ಮತದಾನದ ಮೂಲಕ ಚುನಾಯಿತರಾಗುತ್ತಾರೆ. ಪಾಲಿಕೆಗಳಲ್ಲೂ ಸಹ ನಿಯಮಾನುಸಾರ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಹಿಂದುಳಿದ ವರ್ಗ ಮತ್ತು ಮಹಿಳಾ ಮಿಸಲಾತಿ ಅನುಪಾಲನೆಯಾಗುತ್ತಿದೆ. ಚುನಾಯಿತ ಸದಸ್ಯರ ಜೊತೆಗೆ ರಾಜ್ಯ ಸರ್ಕಾರವು ನಗರ ಯೋಜನೆ, ಶಿಕ್ಷಣ, ಆರೋಗ್ಯ, ಸ್ಥಳೀಯ ಆಡಳಿತದಲ್ಲಿ ಪರಿಣತಿಯುಳ್ಳ ಐದು ಜನರನ್ನು ಸದಸ್ಯರನ್ನಾಗಿ ನೇಮಕ ಮಾಡುತ್ತದೆ. ಸರ್ಕಾರದಿಂದ ನೇಮಕಗೊಂಡ ಸದಸ್ಯರಿಗೆ ಮತ ಚಲಾಯಿಸುವ ಹಕ್ಕಿರುವುದಿಲ್ಲ. ಆದರೆ ಸಭೆಗೆ ಹಾಜರಾಗಿ ಅಲ್ಲಿನ ಕಾರ್ಯಕಲಾಪಗಳಲ್ಲಿ ಭಾಗವಹಿಸಬಹುದು. ಪಾಲಿಕೆ ವ್ಯಾಪ್ತಿಯ ಶಾಸಕರುಗಳು ಮತ್ತು ಲೋಕಸಭಾ ಸದಸ್ಯರುಗಳಿಗೆ ಸಭೆಯಲ್ಲಿ ಭಾಗವಹಿಸುವ ಮತ್ತು ಮತ ಚಲಾಯಿಸುವ ಹಕ್ಕುಗಳಿವೆ. ಪಾಲಿಕೆಯ ಅಧಿಕಾರಾವಧಿಯು ಐದು ವರ್ಷಗಳಾಗಿದ್ದು ವಿಶೇಷ ಸಂದರ್ಭದಲ್ಲಿ ರಾಜ್ಯ ಸರ್ಕಾರ ಗರಿಷ್ಠ ಒಂದು ವರ್ಷಗಳ ಅವಧಿಗೆ ವಿಸ್ತರಿಸಬಹುದು.

ಮಹಾಪೌರ ಮತ್ತು ಉಪ-ಮಹಾಪೌರರು ಪಾಲಿಕೆಯ ನಾಯಕರುಗಳು ಎನಿಸಿಕೊಳ್ಳುತ್ತಾರೆ. ಇವರುಗಳು ಪಾಲಿಕೆಯ ಸದಸ್ಯರುಗಳಿಂದ ಚುನಾಯಿಸಲ್ಪಡುತ್ತಾರೆ. ಇವರುಗಳ ಅಧಿಕಾರಾವಧಿಯು ಒಂದು ವರ್ಷವಾಗಿರುತ್ತದೆ. ಮಹಾಪೌರರು ಪಾಲಿಕೆಯ ಸಭೆಗಳ ಅಧ್ಯಕ್ಷತೆ ವಹಿಸಿ, ಸಭೆಯು ಕೈಗೊಂಡ ತೀರ್ಮಾನಗಳನ್ನು ಕಾರ್ಯಗತಗೊಳಿಸುವ ಕ್ರಮ ತೆಗೆದುಕೊಳ್ಳುತ್ತಾರೆ. ಮಹಾಪೌರರು ಪಾಲಿಕೆಯ ಕಾರ್ಯನಿರ್ವಹಣೆಯನ್ನು ನಿಯಂತ್ರಿಸುತ್ತಾರೆ. ಸಮರ್ಥ ಆಡಳಿತ ನೀಡಲು ಸ್ಥಾಯಿಸಮಿತಿಗಳನ್ನು ರಚಿಸಿಕೊಳ್ಳಲಾಗುತ್ತದೆ.

ಪಾಲಿಕೆಯ ಕಾರ್ಯನಿರ್ವಹಣೆಯನ್ನು ಪಾಲಿಕೆಯ ಆಯುಕ್ತರು ನೋಡಿಕೊಳ್ಳುತ್ತಾರೆ. ಸಾಮಾನ್ಯವಾಗಿ ಭಾರತೀಯ ಆಡಳಿತ ಸೇವೆಯ (IAS) ಅಧಿಕಾರಿಯು ಈ ಹುದ್ದೆಯನ್ನು ಅಲಂಕರಿಸುತ್ತಾರೆ. ಇವರ ಅಧಿಕಾರಾವಧಿ ರಾಜ್ಯ ಸರ್ಕಾರ ನಿಗದಿಪಡಿಸಿದಷ್ಟಾಗಿರುತ್ತದೆ. ಇವರನ್ನು ರಾಜ್ಯ ಸರ್ಕಾರ ನೇಮಿಸುತ್ತದೆ. ಪಾಲಿಕೆಯ ಆಯುಕ್ತರು ಎಲ್ಲಾ ಕಾರ್ಯ ಕಲಾಪಗಳಲ್ಲಿ ಭಾಗವಹಿಸಿ ಬೇಕಾದ ಮಾಹಿತಿ ಒದಗಿಸುತ್ತಾರೆ.

ಆಯುಕ್ತರು ಮಹಾಪೌರರಿಗೆ ಸಹಕರಿಸಿ ಪಾಲಿಕೆಯ ನಿರ್ಧಾರಗಳನ್ನು ಕಾರ್ಯಗತಗೊಳಿಸಲು ಸಂಪೂರ್ಣ ತೊಡಗಿಸಿಕೊಳ್ಳುತ್ತಾರೆ.

**ನಿಮಗಿದು ತಿಳಿದಿರಲಿ:** ಕರ್ನಾಟಕದಲ್ಲಿ ಹತ್ತು ನಗರಪಾಲಿಕೆಗಳು ಹಾಗೂ ಒಂದು ಬೃಹತ್ ಮಹಾನಗರಪಾಲಿಕೆ ಇವೆ. ಅವುಗಳೆಂದರೆ: 1. ಮೈಸೂರು 2. ಹುಬ್ಬಳ್ಳಿ-ಧಾರವಾಡ 3. ಬಳ್ಳಾರಿ 4. ಬೆಳಗಾವಿ 5. ಕಲಬುರಗಿ 6. ದಾವಣಗೆರೆ 7. ಮಂಗಳೂರು 8. ಶಿವಮೊಗ್ಗ 9. ತುಮಕೂರು 10. ವಿಜಯಪುರ ಮತ್ತು ಬೃಹತ್ ಬೆಂಗಳೂರು ಮಹಾನಗರಪಾಲಿಕೆ (BBMP) ಯನ್ನು ಒಳಗೊಂಡಿದೆ. ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ (BBMP) ಯಲ್ಲಿ ಒಟ್ಟು 198 ಜನ ಪಾಲಿಕೆ ಸದಸ್ಯರಿದ್ದಾರೆ.

## ಅಭ್ಯಾಸಗಳು

### I. ಖಾಲಿ ಬಿಟ್ಟ ಸ್ಥಳಗಳನ್ನು ಸೂಕ್ತ ಪದಗಳಿಂದ ತುಂಬಿರಿ.

1. ಗ್ರಾಮಸಭಾ ಅಧ್ಯಕ್ಷತೆಯನ್ನು _______ ವಹಿಸುತ್ತಾರೆ.
2. ಗ್ರಾಮಪಂಚಾಯಿತಿ ಅಧ್ಯಕ್ಷರ ಅಧಿಕಾರವಧಿ _______ ವರ್ಷಗಳು.
3. ಗ್ರಾಮಪಂಚಾಯಿತಿಯಲ್ಲಿ _______ ಜನಸಂಖ್ಯೆಗೆ ಒಬ್ಬ ಸದಸ್ಯರನ್ನು ಆಯ್ಕೆ ಮಾಡಲಾಗುತ್ತದೆ.
4. ಬೆಂಗಳೂರು ನಗರ ಜಿಲ್ಲೆಯಲ್ಲಿ _______ ಜನಸಂಖ್ಯೆಗೆ ಒಬ್ಬ ಸದಸ್ಯರನ್ನು ಆಯ್ಕೆಮಾಡುತ್ತಾರೆ.
5. ಕರ್ನಾಟಕದಲ್ಲಿ ಒಟ್ಟು _______ ಮಹಾನಗರ ಪಾಲಿಕೆಗಳಿವೆ.

### II. ಕೆಳಗಿನ ಪ್ರಶ್ನೆಗಳಿಗೆ ಗುಂಪಿನಲ್ಲಿ ಚರ್ಚಿಸಿ ಉತ್ತರ ಬರೆಯಿರಿ.

1. ಸ್ಥಳೀಯ ಸ್ವಯಂ ಸರ್ಕಾರದ ಕಾರ್ಯಗಳೇನು?
2. ಗ್ರಾಮಪಂಚಾಯಿತಿ ರಚನೆ ಕುರಿತು ಬರೆಯಿರಿ.
3. ಸ್ಥಳೀಯ ಸ್ವಯಂ ಸರ್ಕಾರಗಳ ಆದಾಯದ ಮೂಲಗಳು ಯಾವುವು?
4. ನಗರ ಸ್ಥಳೀಯ ಸಂಸ್ಥೆಗಳ ಕಾರ್ಯಗಳ ಕುರಿತು ಟಿಪ್ಪಣಿ ಬರೆಯಿರಿ.
5. ಮಹಾನಗರ ಪಾಲಿಕೆಯ ಕುರಿತು ಬರೆಯಿರಿ.

### III. ಚಟುವಟಿಕೆಗಳು

1. ನೀವು ಸ್ಥಳೀಯ ಸಂಸ್ಥೆಯ ಸದಸ್ಯರಾದರೆ ಅಲ್ಲಿನ ಸಮಸ್ಯೆಗಳ ಪರಿಹಾರಕ್ಕಾಗಿ ನೀವು ಕೈಗೊಳ್ಳುವ ಕ್ರಮಗಳನ್ನು ಪಟ್ಟಿಮಾಡಿ.
2. ಸ್ಥಳೀಯ ಸಂಸ್ಥೆಗಳಲ್ಲಿ ಮೀಸಲಾತಿ ಒದಗಿಸಿರುವ ಮಾಹಿತಿ ಸಂಗ್ರಹಿಸಿರಿ.

# ಸಮಾಜಶಾಸ್ತ್ರ ಅಧ್ಯಾಯ-1 ಸಮಾಜಶಾಸ್ತ್ರ ಪರಿಚಯ

**ಈ ಅಧ್ಯಾಯದಲ್ಲಿ ಕೆಳಗಿನ ಅಂಶಗಳನ್ನು ತಿಳಿಯುತ್ತೇವೆ.**

1. ಸಮಾಜಶಾಸ್ತ್ರದ ಉಗಮ, ಅರ್ಥ, ಸ್ವರೂಪ, ವ್ಯಾಪ್ತಿ ಮತ್ತು ಮಹತ್ವ.
2. ಸಮಾಜಶಾಸ್ತ್ರ ಮತ್ತು ಇತರ ಸಮಾಜವಿಜ್ಞಾನಗಳ ನಡುವಿನ ಸಂಬಂಧ ಮತ್ತು ವ್ಯತ್ಯಾಸ.
3. ಆರಂಭಿಕ ವಿದೇಶಿ ಸಮಾಜಶಾಸ್ತ್ರಜ್ಞರು
    a. ಆಗಸ್ಟ್ ಕಾಮ್ಟೆ
    b. ಕಾರ್ಲ್ ಮಾರ್ಕ್ಸ್
    c. ಎಮಿಲಿ ಡರ್ಖೆಮ್
    d. ಮ್ಯಾಕ್ಸ್ ವೇಬರ್
4. ಭಾರತದ ಪ್ರಮುಖ ಸಮಾಜಶಾಸ್ತ್ರಜ್ಞರು
    a. ಬಿ. ಆರ್. ಅಂಬೇಡ್ಕರ್
    b. ಜಿ. ಎಸ್. ಘುರೆ
    c. ಎಂ.ಎನ್. ಶ್ರೀನಿವಾಸ್
    d. ಸಿ. ಪಾರ್ವತಮ್ಮ
    e. ಇರಾವತಿ ಕರ್ವೆ
    f. ಎ. ಆರ್. ದೇಸಾಯಿ

## ಸಮಾಜಶಾಸ್ತ್ರದ ಉಗಮ

ಮಾನವ ಬದುಕು ಕುತೂಹಲಕಾರಿಯಾದದು. ಬಹಳ ಹಿಂದಿನಿಂದಲೂ ಮಾನವ ತಾನು ವಾಸಿಸುವ ಪರಿಸರವನ್ನು, ನಿಸರ್ಗವನ್ನು ಮತ್ತು ತಾನೇ ಸೃಷ್ಟಿಸಿರುವ ಸಾಮಾಜಿಕ ಜಗತ್ತನ್ನು ಹೆಚ್ಚು ಆಳವಾಗಿ ಮತ್ತು ನಿಖರವಾಗಿ, ಅರ್ಥೈಸಿಕೊಳ್ಳುವ ಪ್ರಯತ್ನವನ್ನು ಮಾಡುತ್ತಾ ಬಂದಿರುವುದು ತಿಳಿಯುತ್ತದೆ. ಇತರ ಪ್ರಾಣಿಗಳಿಗಿಂತ ಭಿನ್ನವಾಗಿರುವ 'ಚಿಂತನಾಜೀವಿ' ಅಥವಾ 'ಆಲೋಚನಾ ಜೀವಿ' ಮಾನವ. ಮಾನವನಿಗೂ ಮತ್ತು ಪ್ರಾಣಿಗಳಿಗೂ ಬಹಳ ವ್ಯತ್ಯಾಸಗಳಿವೆ. ಉದಾಹರಣೆಗೆ; ದೈಹಿಕ ರಚನೆ ಮತ್ತು ಬೆಳವಣಿಗೆಯಲ್ಲಿ, ಆಹಾರ ಸೇವನೆಯಲ್ಲಿ, ಕ್ರಿಯಾಶೀಲತೆಯಲ್ಲಿ, ಮೆದುಳಿನ ವಿಕಾಸದಲ್ಲಿ ಹೆಚ್ಚಿನ ವ್ಯತ್ಯಾಸಗಳನ್ನು ನಾವು ಕಾಣಬಹುದು.

ಮಾನವ ಸಮಾಜ ಹಂತಹಂತವಾಗಿ ವಿಕಾಸಗೊಳ್ಳುತ್ತಾ ಬಂದು ಇಂದು ವಿಜ್ಞಾನ, ಮಾಹಿತಿ ತಂತ್ರಜ್ಞಾನ ಯುಗವನ್ನು ತಲುಪಿ, ತಾನು ವಾಸಿಸುವ ಗ್ರಹದ ಜೊತೆಗೆ ಇತರ ಗ್ರಹಗಳಲ್ಲಿ ಏನಿದೆ ಎನ್ನುವುದನ್ನು ತಿಳಿದುಕೊಳ್ಳಲು ಹವಣಿಸುವ ಮಟ್ಟವನ್ನು ತಲುಪಿದೆ.

## ಮಾನವ ಸಂಘಜೀವಿ/ ಸಮಾಜಜೀವಿ:

ವ್ಯಕ್ತಿ ಮತ್ತು ಸಮಾಜದ ನಡುವಿನ ಸಂಬಂಧ ಅನನ್ಯವಾದುದು. ವ್ಯಕ್ತಿಯಿಲ್ಲದೆ ಸಮಾಜವಿಲ್ಲ, ಸಮಾಜವಿಲ್ಲದೆ ವ್ಯಕ್ತಿಯಿಲ್ಲ. ನಾವು ಸಾಮಾನ್ಯವಾಗಿ ಆಲೋಚಿಸಿದಾಗ, ತಾನೊಬ್ಬನೇ ಭೂಮಿಯಲ್ಲಿ ಇರಲು ಸಾಧ್ಯವೆ? ಆಗ ಎಲ್ಲರಿಗೂ ಸಿಗುವ ಉತ್ತರ ಒಂದೇ 'ಅಸಾಧ್ಯ' ಎಂಬುದು ಮಾನವ ಸಂಘಜೀವಿ ಎಲ್ಲರ ಜೊತೆಯಲ್ಲಿ ಬದುಕಲು ಇಚ್ಛಿಸುತ್ತಾನೆ/ಳೆ. ನಮ್ಮೆಲ್ಲರ ವಿಕಾಸ ಮತ್ತು ಬೆಳವಣಿಗೆಗೆ ಸಂಘ ಜೀವನ ಅಗತ್ಯ. ಆದುದರಿಂದಲೇ ಮಾನವ ಸಮಾಜವನ್ನು 'ಸಾಮಾಜಿಕ ಸಂಬಂಧಗಳ ಬಲೆ' ಎಂದೂ ಕರೆಯಲಾಗುತ್ತದೆ.

## ಸಮಾಜಶಾಸ್ತ್ರದ ಅರ್ಥ:

"ಸೋಷಿಯಾಲಜಿ" ಎನ್ನುವುದು 'ಸಮಾಜಶಾಸ್ತ್ರ' ಎಂಬ ಕನ್ನಡಕ್ಕೆ ತತ್ಸಮಾನ ಅರ್ಥವುಳ್ಳ ಇಂಗ್ಲಿಷ್ ಪದ. ಸೋಷಿಯಾಲಜಿ ಎಂಬ ಪದವು ಲಾಟಿನ್ ಭಾಷೆಯ 'ಸೋಶಿಯಸ್' ಮತ್ತು ಗ್ರೀಕ್ ಭಾಷೆಯ 'ಲಾಗೋಸ್' ಎಂಬ ಶಬ್ದಗಳಿಂದ ಉತ್ಪತ್ತಿ ಹೊಂದಿದೆ. 'ಸೋಶಿಯಸ್' ಎಂದರೆ ಜೊತೆಗಾರ, ಸಹಚರ. ಹಾಗೆಯೇ 'ಲಾಗೋಸ್' ಎಂದರೆ ಶಾಸ್ತ್ರ ಅಥವಾ ವಿಜ್ಞಾನವೆಂಬ ಅರ್ಥವಿದೆ. ಹೀಗೆ "ಸಮಾಜಶಾಸ್ತ್ರ" ಎಂಬುದು ಸಮಾಜದ ವೈಜ್ಞಾನಿಕ ಅಧ್ಯಯನ ಶಾಸ್ತ್ರ.

## *ಸಮಾಜಶಾಸ್ತ್ರದ ವ್ಯಾಖ್ಯೆಗಳು*

**ಆಗಸ್ಟ್ ಕಾಮ್ಟೆ:** ಸಮಾಜಶಾಸ್ತ್ರವು ನಿಸರ್ಗ ಸಹಜವಾದ ಹಾಗು ಸ್ಥಿರರೂಪದ ನಿಯಮಗಳಿಗೆ ಒಳಪಟ್ಟ ವಿಜ್ಞಾನವಾಗಿದ್ದು ಅಂತಹ ನಿಯಮಗಳನ್ನು ಕಂಡುಕೊಳ್ಳುವುದೇ 'ಸಮಾಜಶಾಸ್ತ್ರ' ಎಂದು ಹೇಳಿದ್ದಾರೆ.

**ಮ್ಯಾಕ್ಸ್ ವೇಬರ್:** ಸಾಮಾಜಿಕ ವರ್ತನೆಯನ್ನು ಅರ್ಥೈಸುವ ಅಧ್ಯಯನವೆ "ಸಮಾಜಶಾಸ್ತ್ರ" ಎಂದು ಹೇಳಿದ್ದಾರೆ.

**ಡರ್ಖೆ:** ಸಾಮಾಜಿಕ ಸಂಸ್ಥೆಗಳ ವಿಜ್ಞಾನವೇ "ಸಮಾಜಶಾಸ್ತ್ರ" ಎಂದು ಹೇಳಿದ್ದಾರೆ. ಸಾಮಾನ್ಯವಾಗಿ ಹೇಳುವುದಾದರೆ: "ಸರ್ವ ಮಾನವ ಸಮಾಜದ ಅಧ್ಯಯನವೆ ಸಮಾಜಶಾಸ್ತ್ರ" ಎಂದು ಹೇಳಬಹುದು.

## ಸಮಾಜಶಾಸ್ತ್ರದ ಉಗಮ

ಸಮಾಜಶಾಸ್ತ್ರವು ಒಂದು ಸ್ವತಂತ್ರ ಹಾಗೂ ಪ್ರತ್ಯೇಕ ಅಧ್ಯಯನ ಶಾಸ್ತ್ರವಾಗಿ ರೂಪುಗೊಳ್ಳತೊಡಗಿದ್ದು, 19 ನೇ ಶತಮಾನದ ಮಧ್ಯಭಾಗದಲ್ಲಿ ಎನ್ನಬಹುದು. ನಂತರದ 50 ವರ್ಷಗಳಲ್ಲಿ ಅದು ವೈಜ್ಞಾನಿಕ ಸ್ವರೂಪವನ್ನು ಪಡೆಯಿತು. ಸಮಾಜ ವಿಜ್ಞಾನಗಳಾದ ಇತಿಹಾಸ, ರಾಜ್ಯಶಾಸ್ತ್ರ, ಅರ್ಥಶಾಸ್ತ್ರ, ಮನಃಶ್ಶಾಸ್ತ್ರ ಇತ್ಯಾದಿಗಳು ತಮ್ಮದೇ ಆದ ದೀರ್ಘ ಹಿನ್ನೆಲೆಯನ್ನು ಹೊಂದಿರಬಹುದಾದರೂ 'ಸಮಾಜ ವಿಜ್ಞಾನಗಳು' ಎಂಬ ಮಾನ್ಯತೆ ಅವುಗಳಿಗೆ ಲಭವಾದುದು ಸಾ. ಶ. 18 ಹಾಗೂ 19 ನೆಯ ಶತಮಾನಗಳಲ್ಲಿ 'ಯುರೋಪಿನಲ್ಲಾದ ಕೈಗಾರಿಕಾ ಕ್ರಾಂತಿ ಮತ್ತು ಫ್ರಾನ್ಸಿನ ಮಹಾಕ್ರಾಂತಿಯ ಬೆಳವಣಿಗೆಯಿಂದ. ಸಾ. ಶ. 16 ಮತ್ತು 18 ನೆಯ ಶತಮಾನಗಳಲ್ಲಿ ಸಂಭವಿಸಿದ ಜ್ಞಾನ ಪುನರುತ್ಥಾನ, ಧಾರ್ಮಿಕ ಸುಧಾರಣೆ ಇನ್ನೂ ಮುಂತಾದ ಬೌದ್ಧಿಕ ಪ್ರಕ್ರಿಯೆಗಳು ಹಾಗೂ ಭೌತ ವಿಜ್ಞಾನಗಳಿಗೆ ಸಿಕ್ಕಿದ ಪ್ರೇರಣೆ ಸಮಾಜಶಾಸ್ತ್ರದ ಉಗಮಕ್ಕೆ ಕಾರಣವಾಗಿವೆ.

### *ಸಮಾಜಶಾಸ್ತ್ರದ ವ್ಯಾಪ್ತಿ:*

ಸಮಾಜಶಾಸ್ತ್ರವು ಮಾನವ ಸಮಾಜವನ್ನು ಅಧ್ಯಯನ ಮಾಡುತ್ತದೆ. ಈ ಶಾಸ್ತ್ರಮಾನವನ ಸಾಮಾಜಿಕ ಜೀವನ, ಸಾಮಾಜಿಕ ಸಂಬಂಧಗಳು, ಸಾಮಾಜಿಕ ಸಂಸ್ಥೆಗಳು ಮತ್ತು ಸಾಮಾಜಿಕ ಪ್ರಕ್ರಿಯೆಗಳನ್ನು ತನ್ನ ವ್ಯಾಪ್ತಿ ಪರಿಗಣಿಸುತ್ತದೆ.

### *ಸಮಾಜಶಾಸ್ತ್ರದ ಸ್ವರೂಪ:*

ಸಮಾಜ ವಿಜ್ಞಾನಗಳ ಸಮೂಹದಲ್ಲಿ ಸಮಾಜಶಾಸ್ತ್ರಕ್ಕೆ ತನ್ನದೇ ಆದ ವಿಶಿಷ್ಟ ಸ್ಥಾನವಿದೆ. ತನ್ನ ಕೆಲವು ಗುಣಗಳಿಂದಾಗಿ ಅದು ಇತರ ಸಮಾಜ ವಿಜ್ಞಾನಗಳಿಗಿಂತ ಭಿನ್ನವಾಗಿದೆ. ಸಮಾಜಶಾಸ್ತ್ರವು ಒಂದು ಪ್ರತ್ಯೇಕವಾದ ಮತ್ತು ಸ್ವತಂತ್ರವಾದ ಅಧ್ಯಯನ ಶಾಸ್ತ್ರವೆಂದು ಪರಿಗಣಿಸಲ್ಪಟ್ಟಿದೆ.

1. **ಸಮಾಜಶಾಸ್ತ್ರವು ಒಂದು ಸಮಾಜವಿಜ್ಞಾನವಾಗಿದೆಯೇ ಹೊರತು ಭೌತವಿಜ್ಞಾನವಾಗಿಲ್ಲ:** ಸಮಾಜಶಾಸ್ತ್ರವು ಸಮಾಜವಿಜ್ಞಾನಗಳ ಕುಟುಂಬಕ್ಕೆ ಸೇರಿದುದಾಗಿದೆಯೇ ಹೊರತು ಭೌತ ವಿಜ್ಞಾನಗಳ ಸಮೂಹಕ್ಕೆ ಸೇರಿಲ್ಲ. ಸಮಾಜ ವಿಜ್ಞಾನಗಳಲ್ಲಿ ಒಂದಾದ ಸಮಾಜಶಾಸ್ತ್ರವು ಮಾನವ ಸಮಾಜದ ಸಾಮಾಜಿಕ ಚಟುವಟಿಕೆಗಳು ಮತ್ತು ಸಾಮಾಜಿಕ ಜೀವನವನ್ನು ಅಧ್ಯಯನ ಮಾಡುತ್ತದೆ.

ಹಾಗೆಯೇ ಸಮಾಜಶಾಸ್ತ್ರವು ಇತಿಹಾಸ, ರಾಜ್ಯಶಾಸ್ತ್ರ, ಅರ್ಥಶಾಸ್ತ್ರ, ಮನಃಶಾಸ್ತ್ರ, ಮಾನವಶಾಸ್ತ್ರಗಳೊಂದಿಗೆ ನಿಕಟ ಸಂಪರ್ಕವನ್ನು ಹೊಂದಿದೆ.

2. **ಸಮಾಜಶಾಸ್ತ್ರವು ಒಂದು ನಿಶ್ಚಯಾತ್ಮಕ ಶಾಸ್ತ್ರವೇ ಹೊರತು ಗುಣನಿರ್ದೇಶಕ ಶಾಸ್ತ್ರವಲ್ಲ:** ಸಮಾಜಶಾಸ್ತ್ರವು ತನ್ನ ಅಧ್ಯಯನದಲ್ಲಿ ವಿಷಯವು “ಹೇಗಿದೆಯೋ ಹಾಗೆ” ಅಧ್ಯಯನ ಮಾಡುವುದೇ ಹೊರತು ಅದು “ಹೇಗಿರಬೇಕು” ಎನ್ನುವ ದೃಷ್ಟಿಯಿಂದ ಅಧ್ಯಯನ ಮಾಡುವುದಿಲ್ಲ. ಈ ದೃಷ್ಟಿಕೋನವು ನೈತಿಕವೂ ಅಲ್ಲ. ಅನೈತಿಕವೂ ಅಲ್ಲ. ಆದರೆ ನೀರಪೇಕ್ಷವಾದುದು. ಅಂದರೆ ನೈತಿಕ ವಿಷಯಗಳಲ್ಲಿ ಸಮಾಜಶಾಸ್ತ್ರವು ತಟಸ್ಥಧೋರಣೆಯನ್ನು ಹೊಂದಿದೆ.
3. **ಸಮಾಜಶಾಸ್ತ್ರವು ಒಂದು ಶುದ್ಧಶಾಸ್ತ್ರವೇ ಹೊರತು ಪ್ರಾಯೋಗಿಕ ಅಥವಾ ಆನ್ವಯಿಕ ವಿಜ್ಞಾನವಲ್ಲ:** ಒಂದು ಶುದ್ಧ ಶಾಸ್ತ್ರವಾಗಿರುವ ಸಮಾಜಶಾಸ್ತ್ರದ ಉದ್ದೇಶವು ಜ್ಞಾನಸಂಪಾದನೆಯೇ ಹೊರತು, ಪ್ರಾಯೋಗಿಕ ಶಾಸ್ತ್ರಗಳಂತಲ್ಲ.
4. **ಸಮಾಜ ಶಾಸ್ತ್ರವು ಅಮೂರ್ತ ಸ್ವರೂಪದ ವಿಜ್ಞಾನವಾಗಿದೆಯೇ ಹೊರತು ಮೂರ್ತಸ್ವರೂಪದ್ದಲ್ಲ:** ಸಮಾಜಶಾಸ್ತ್ರವು ಕೆಲವು ನಿರ್ದಿಷ್ಟ ಮಾನವ ಘಟನೆಗಳ ಮೂರ್ತರೂಪದಲ್ಲಿ ಆಸಕ್ತವಾಗಿಲ್ಲ. ಆದರೆ ಸಾಮಾನ್ಯ ಸ್ವರೂಪದ ಮಾನವ ಘಟನೆಗಳ ‘ರೂಪ’ ಹಾಗೂ ‘ನಮೂನೆ’ ಗಳಲ್ಲಿ ಮಾತ್ರ ಆಸಕ್ತವಾಗಿದೆ. ಉದಾಹರಣೆಗೆ; ಸಮಾಜಶಾಸ್ತ್ರವು ಇತಿಹಾಸದಂತೆ ಯಾವುದೇ ನಿಶ್ಚಿತವಾದ ಯುದ್ಧ ಅಥವಾ ಕ್ರಾಂತಿಯಲ್ಲಿ ಆಸಕ್ತವಾಗಿಲ್ಲ. ಅರ್ಥಾತ್ ವಿಭಿನ್ನ ರೀತಿಯ ಸಾಮಾಜಿಕ ಸಂಘರ್ಷಗಳೆಂದು ಭಾವಿಸಿ ಅವುಗಳ ಸಾಮಾನ್ಯ ಸ್ವರೂಪ ಹಾಗೂ ಲಕ್ಷಣಗಳನ್ನು ಅಧ್ಯಯನ ಮಾಡುತ್ತದೆ.
5. **ಸಮಾಜ ಶಾಸ್ತ್ರವು ಒಂದು ಸಾಮಾನ್ಯ ವಿಜ್ಞಾನವಾಗಿದೆಯೇ ಹೊರತು ವಿಶೇಷ ವಿಜ್ಞಾನವಾಗಿಲ್ಲ:** ಸಮಾಜ ವಿಜ್ಞಾನಗಳಲ್ಲಿ ಸಮಾಜಶಾಸ್ತ್ರವು ಮಾತ್ರ ಮಾನವನ ಅಂತರ್‌ಕ್ರಿಯೆಗಳು ಒಳಗೊಳ್ಳುವ ಆರ್ಥಿಕ, ರಾಜಕಿಯ, ಧಾರ್ಮಿಕ, ನೈತಿಕ, ಬೌದ್ಧಿಕ, ಮುಂತಾದ ಹಲವು ಸ್ಥಿತಿಗಳ ಸಾಮಾನ್ಯ ಸ್ವರೂಪವನ್ನು ಅಧ್ಯಯನ ಮಾಡುತ್ತದೆ. ಇದರ ಅಧ್ಯಯನ ವ್ಯಾಪ್ತಿ ವಿಶಾಲವಾದುದೇ ಹೊರತು ಉಳಿದ ಸಮಾಜ ವಿಜ್ಞಾನಗಳಂತೆ ಸೀಮಿತವಾದುದಲ್ಲ.

## ಸಮಾಜಶಾಸ್ತ್ರದ ಪ್ರಾಮುಖ್ಯತೆ/ ಮಹತ್ವ

ಸಮಾಜ ವಿಜ್ಞಾನಗಳಲ್ಲಿ ಸಮಾಜಶಾಸ್ತ್ರ ಕಿರಿಯ ವಿಜ್ಞಾನವಾಗಿದ್ದರೂ ಅದರ ಉಪಯೋಗಗಳನ್ನು ಸಾರ್ವತ್ರಿಕವಾಗಿ ಗುರುತಿಸಲಾಗಿದೆ.

1. **ಸಮಾಜಶಾಸ್ತ್ರವು ವೈಜ್ಞಾನಿಕವಾಗಿ ಮಾನವ ಸಮಾಜವನ್ನು ಅಧ್ಯಯನ ಮಾಡುತ್ತದೆ:** ಸಮಾಜಶಾಸ್ತ್ರವು ವೈಜ್ಞಾನಿಕ ವಿಧಾನದ ಮೂಲಕ ಮಾನವ ಸಮಾಜದ ಬಗ್ಗೆ

ಕ್ರಮಬದ್ಧವಾದ ಜ್ಞಾನವನ್ನು ಸಂಗ್ರಹಿಸಿದ್ದು, ಇದು ವಿವಿಧ ಕ್ಷೇತ್ರದಲ್ಲಿ ಪ್ರಗತಿ ಸಾಧಿಸಲು ಸಹಕಾರಿಯಾಗಿದೆ.

2. **ವ್ಯಕ್ತಿತ್ವದ ಬೆಳವಣಿಗೆಗೆ ಪೂರಕ:** ಮಾನವ ಮೂಲಭೂತವಾಗಿ ಸಾಮಾಜಿಕ ಜೀವಿ. ಸಮಾಜದಲ್ಲಿ ಬದಲಾಗುವ ಸನ್ನಿವೇಶಗಳಿಗೆ ಅವನು ಹೊಂದಿಕೊಳ್ಳಬೇಕಾಗುತ್ತದೆ, ಸಮಾಜದ ರಚನೆ, ಬೆಳವಣಿಗೆ, ಬದಲಾವಣೆ, ಸಮಸ್ಯೆಗಳು, ವ್ಯಕ್ತಿಯ ಬಾಧ್ಯತೆಗಳು ಇತ್ಯಾದಿ. ಇವುಗಳ ಬಗ್ಗೆ ಸಮಗ್ರವಾದ ಅರಿವು ಮೂಡಿಸಿ ಎಲ್ಲಾ ರೀತಿಯ ವ್ಯಕ್ತಿತ್ವ ಬೆಳವಣಿಗೆಗೆ ಎಡೆಮಾಡಿಕೊಡುತ್ತದೆ.
3. **ಸಾಮಾಜಿಕ ಪ್ರಕ್ರಿಯೆಗಳ ಪರಿಚಯ:** ಇತರೆ ಸಮಾಜದ ಧರ್ಮ, ಸಂಪ್ರದಾಯಗಳು, ಸಂಸ್ಕೃತಿ, ನೀತಿ-ನಿಯಮಗಳು, ಸಾಮಾಜಿಕ ಸಂಸ್ಥೆಗಳು, ಮೌಲ್ಯಗಳು, ಆದರ್ಶಗಳು ಇತ್ಯಾದಿಗಳ ಬಗೆ ವೈಜ್ಞಾನಿಕ ಮತ್ತು ವೈಚಾರಿಕ ದೃಷ್ಟಿಕೋನಗಳನ್ನು ಬೆಳೆಸಿಕೊಳ್ಳುವಲ್ಲಿ, ಸಮಾಜದ ವಿವಿಧ ಸಮೂಹಗಳು ಹಾಗೂ ಜನರೊಂದಿಗೆ ಸಹ-ಜೀವನ, ಸಹ-ಸಂಬಂಧಗಳನ್ನು ತಿಳಿದುಕೊಳ್ಳಲು ಸಮಾಜಶಾಸ್ತ್ರ ಸಹಕಾರಿಯಾಗಿದೆ.
4. **ಸಾಮಾಜಿಕ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳುವಲ್ಲಿ ಮತ್ತು ಪರಿಹಾರ ಕಂಡುಕೊಳ್ಳುವಲ್ಲಿ ಸಹಾಯಕ:** ಪ್ರತಿಯೊಂದು ಸಮಾಜವು ತನ್ನದೇ ಆದ ಸಮಸ್ಯೆಗಳನ್ನು ಎದುರಿಸುತ್ತಲಿರುತ್ತದೆ. ಉದಾಹರಣೆಗೆ; ಅಪರಾಧ, ಬಾಲಾಪರಾಧ, ಕೋಮುಗಲಭೆ, ಮದ್ಯಪಾನ, ಹಸಿವು, ಅಪೌಷ್ಟಿಕತೆ, ಜಾತೀಯತೆ, ಬಡತನ, ನಿರುದ್ಯೋಗ, ಭಯೋತ್ಪಾದನೆ, ಜೂಜಾಟ, ವೇಶ್ಯಾವಾಟಿಕೆ, ಮಕ್ಕಳ ದುಡಿಮೆ, ಅಸಮಾನತೆ, ಹಿಂಸೆ, ಹೀಗೆ ಮುಂತಾದ ಸಾಮಾಜಿಕ ಸಮಸ್ಯೆಗಳನ್ನು ನಾವು ಎದುರಿಸುತ್ತಿದ್ದೇವೆ. ಇಂತಹ ಸಾಮಾಜಿಕ ಸಮಸ್ಯೆಗಳನ್ನು ಅರ್ಥಮಾಡಿಕೊಂಡು ಅವುಗಳ ಪರಿಹಾರಕ್ಕೆ ಉಪಯುಕ್ತ ಸಲಹೆಗಳನ್ನು ಸಮಾಜಶಾಸ್ತ್ರ ವೈಜ್ಞಾನಿಕವಾಗಿ ನೀಡುತ್ತದೆ.
5. **ಅಭಿವೃದ್ಧಿ ಯೋಜನೆಗಳನ್ನು ಪರಿಣಾಮಕಾರಿಯಾಗಿ ರೂಪಿಸಲು ಸಮಾಜಶಾಸ್ತ್ರ ಸಹಕಾರಿಯಾಗಿದೆ:** ಸಮಾಜದ ವೈಜ್ಞಾನಿಕ ಅಧ್ಯಯನದ ಮೂಲಕ ಸಾಮಾಜಿಕ ಅಭಿವೃದ್ಧಿ ಯೋಜನೆಗಳನ್ನು ಹೆಚ್ಚು ಪರಿಣಾಮಕಾರಿಯಾಗಿ ರಚಿಸಲು ಸಮಾಜಶಾಸ್ತ್ರವು ನೆರವಾಗುತ್ತದೆ.

## ಸಮಾಜಶಾಸ್ತ್ರ ಮತ್ತು ಇತರ ಸಮಾಜವಿಜ್ಞಾನಗಳ ನಡುವಿನ ಸಂಬಂಧ ಮತ್ತು ವ್ಯತ್ಯಾಸ.

ಸಮಾಜಶಾಸ್ತ್ರವು ಬಹಳ ಕಿರಿಯ ಸಮಾಜ ವಿಜ್ಞಾನ. ಅದು ತನ್ನದೇ ಆದ ಅಧ್ಯಯನ ವಿಷಯಗಳೊಂದಿಗೆ ಮತ್ತು ಇತರೆ ಸಮಾಜ ವಿಜ್ಞಾನಗಳ ಜೊತೆಗೆ ಸಹ ಸಂಬಂಧವನ್ನು ಹೊಂದಿದೆ.

**ಸಮಾಜಶಾಸ್ತ್ರ ಮತ್ತು ರಾಜ್ಯಶಾಸ್ತ್ರದ ನಡುವಿನ ಸಂಬಂಧ:**

ರಾಜ್ಯಶಾಸ್ತ್ರ ಮತ್ತು ಸಮಾಜಶಾಸ್ತ್ರದ ನಡುವೆ ಬಹಳ ನಿಕಟವಾದ ಸಂಬಂಧವಿದೆ. ರಾಜ್ಯಶಾಸ್ತ್ರ ಮನುಷ್ಯನ ರಾಜಕೀಯ ಚಟುವಟಿಕೆಗಳನ್ನು, ರಾಜಕೀಯ ಸಂಸ್ಥೆ ಮತ್ತು ರಾಜಕೀಯ ವ್ಯವಸ್ಥೆಯ ನಡುವಿನ ವ್ಯವಹಾರಗಳನ್ನು ಅಧ್ಯಯನ ಮಾಡುತ್ತದೆ. ಸಮಾಜಶಾಸ್ತ್ರವು ರಾಜಕೀಯ ವ್ಯವಸ್ಥೆಯ ಅಡಿಯಲ್ಲಿ ಬರುವ ಸಂಘಟಿತ ಸಾಮಾಜಿಕ ಗುಂಪುಗಳು ಮತ್ತು ಸಂಸ್ಥೆಗಳನ್ನು ಅಧ್ಯಯನ ಮಾಡುತ್ತದೆ.

**ಸಮಾಜಶಾಸ್ತ್ರ ಮತ್ತು ಇತಿಹಾಸದ ನಡುವಿನ ಸಂಬಂಧ:**

ಸಮಾಜಶಾಸ್ತ್ರ ಮತ್ತು ಇತಿಹಾಸ ತುಂಬಾ ಪರಸ್ಪರವಾಗಿವೆ. ಇತಿಹಾಸವು ಸಮಾಜದ ಹಿಂದಿನ ಬದುಕಿನ ಪುನರ್‌ರಚನೆಯಾಗಿದೆ. ಸಮಾಜಶಾಸ್ತ್ರವು ಸಮಕಾಲೀನ ಮಾನವ ಸಮಾಜದ ಪ್ರಸ್ತುತ ರಚನೆಯಾಗಿದೆ. ಸಮಕಾಲೀನ ಸಮಾಜದ ವಿವಿಧ ಸಾಮಾಜಿಕ ಘಟನೆಗಳು ಮತ್ತು ಅದರ ವಿವರಣೆಗಳನ್ನು ಇತಿಹಾಸ ಬರವಣಿಗೆಗಾರರಿಗೆ ದಾಖಲೆಯ ಜೊತೆಗೆ ವೈಜ್ಞಾನಿಕ ಮಾಹಿತಿ ನೀಡುವಲ್ಲಿ ಸಮಾಜಶಾಸ್ತ್ರ ಸಹಕಾರಿಯಾಗಿದೆ.

**ಸಮಾಜಶಾಸ್ತ್ರ ಮತ್ತು ಮಾನವಶಾಸ್ತ್ರದ ನಡುವಿನ ಸಂಬಂಧ:**

ಸಮಾಜಶಾಸ್ತ್ರ ಮತ್ತು ಮಾನವಶಾಸ್ತ್ರದ ನಡುವಿನ ಸಂಬಂಧವು ವ್ಯಾಪಕವಾಗಿ ಗುರುತಿಸಲ್ಪಟ್ಟಿದೆ. ಮಾನವಶಾಸ್ತ್ರವು ಜನಾಂಗ, ಸಮುದಾಯಗಳು ಮತ್ತು ಸಂಸ್ಕೃತಿಯು ಹಾದು ಬಂದ ದಾರಿಯನ್ನು ತಿಳಿಸುತ್ತದೆ. ಮಾನವರ ಸಾಮಾಜಿಕ ಜೀವನದ ಸಮಗ್ರ ಅಧ್ಯಯನದ ಮೂಲಕ ಸಮಾಜಶಾಸ್ತ್ರವು ಬಹಳ ವಿಸ್ತಾರವಾಗಿ ಬೆಳೆಯುವ ಜೊತೆಗೆ ವಿವಿಧ ಸಮಾಜಗಳ ಬಗ್ಗೆ, ಅಲ್ಲಿನ ಸಾಮಾಜಿಕ ಸಂಸ್ಥೆಗಳ ಬಗ್ಗೆ ವಿಶ್ಲೇಷಣಾತ್ಮಕ ವಿವರಣೆಯನ್ನು ನೀಡುತ್ತದೆ.

**ಸಮಾಜಶಾಸ್ತ್ರ ಮತ್ತು ಮನೋವಿಜ್ಞಾನದ ನಡುವಿನ ಸಂಬಂಧ:**

ಸಮಾಜಶಾಸ್ತ್ರ ಮತ್ತು ಮನೋವಿಜ್ಞಾನ ಒಂದಕ್ಕೊಂದು ಸಹಾಯಕ ವಿಜ್ಞಾನವಾಗಿವೆ. ಮನೋವಿಜ್ಞಾನ ಮಾನವನ ವರ್ತನೆಯನ್ನು ಮನೋವಿಜ್ಞಾನದ ನೆಲೆಯಲ್ಲಿ ಅಧ್ಯಯನ ಮಾಡುತ್ತದೆ. ಸಮಾಜಶಾಸ್ತ್ರ ಸಮಾಜದಲ್ಲಿ ವ್ಯಕ್ತಿಗಳ ಸಾಮಾಜಿಕ ನಡುವಳಿಕೆಗಳನ್ನು, ಸಾಮಾಜಿಕ ಸಂಸ್ಥೆಗಳ ಕಾರ್ಯಗಳನ್ನು, ವೈಜ್ಞಾನಿಕ ಅಧ್ಯಯನದ ಮೂಲಕ ಅರ್ಥೈಸುತ್ತದೆ.

**ಸಮಾಜಶಾಸ್ತ್ರ ಮತ್ತು ಅರ್ಥಶಾಸ್ತ್ರದ ನಡುವಿನ ಸಂಬಂಧ:**

ಅರ್ಥಶಾಸ್ತ್ರವು ಸಮಾಜದ ಆರ್ಥಿಕ ಚಟುವಟಿಕೆಗಳನ್ನು ಅಧ್ಯಯನ ಮಾಡಿದರೆ, ಸಮಾಜಶಾಸ್ತ್ರವು ಜನರ ಸಾಮಾಜಿಕ ಅಂಶಗಳ ಜೊತೆಗೆ ಆರ್ಥಿಕ ಅಂಶಗಳು ಹೇಗೆ

ವ್ಯವಹರಿಸುತ್ತವೆ? ಆರ್ಥಿಕ ಅಂಶಗಳು ಜನರ ವರ್ತನೆಗಳನ್ನು ಹೇಗೆ ರೂಪಿಸುತ್ತಿವೆ ಎನ್ನುವುದನ್ನು ವಿಶ್ಲೇಷಣೆಗೆ ಒಳಪಡಿಸುತ್ತದೆ.

ಒಟ್ಟಾರೆ ಒಂದು ಸಮಾಜದ ಸಾಮಾಜಿಕ ವರ್ತನೆಗಳನ್ನು ಅರ್ಥೈಸುವಾಗ ಸಮಾಜಶಾಸ್ತ್ರವು ಇತರಎಲ್ಲಾ ಸಮಾಜ ವಿಜ್ಞಾನಗಳ ಜೊತೆ ತನ್ನದೇ ಆದ ಸಹ ಸಂಬಂಧವನ್ನು ಹೊಂದಿದೆ.

## ಆರಂಭಿಕ ವಿದೇಶಿ ಸಮಾಜಶಾಸ್ತ್ರಜ್ಞರು

ಆರಂಭಿಕ ವಿದೇಶಿ ಸಮಾಜಶಾಸ್ತ್ರಜ್ಞರ ವಿವರ ಈ ಕೆಳಗಿನಂತಿದೆ.

### *1. ಆಗಸ್ಟ್ ಕಾಮ್ಟೆ(1798-1857):*

ಆಗಸ್ಟ್ ಕಾಮ್ಟೆ ಫ್ರಾನ್ಸ್‌ನ ಒಬ್ಬ ಮಹಾನ್ ಚಿಂತಕ. ಮೊದಲ ಸಾಮಾಜಿಕ ತತ್ವಜ್ಞಾನಿ. 'ಸಮಾಜಶಾಸ್ತ್ರದ ಪಿತಾಮಹ' ಎಂದು ಆಗಸ್ಟ್ ಕಾಮ್ಟೆ ಅವರನ್ನು ಕರೆಯಲಾಗುತ್ತದೆ. ಆಗಸ್ಟ್ ಕಾಮ್ಟೆ ಸಮಾಜವನ್ನು ವೈಜ್ಞಾನಿಕವಾಗಿ ಅಧ್ಯಯನ ಮಾಡಿ ಸಮಾಜಶಾಸ್ತ್ರಕ್ಕೆ ವಿಜ್ಞಾನದ ಸ್ಥಾನ ಸಿಗುವಂತೆ ಮಾಡಿದ್ದಾರೆ. ಆಗಸ್ಟ್ ಕಾಮ್ಟೆ ಅವರ ಪ್ರಯತ್ನವನ್ನು ಬಲವಾಗಿ ಸಮರ್ಥನೆ ಮಾಡಿದವರಲ್ಲಿ ಹರ್ಬರ್ಟ್ ಸ್ಪೆನ್ಸರ್, ಮಿಮಿಲಿಡರ್ಖೆ, ಮ್ಯಾಕ್ಸ್ ವೇಬರ್ ಪ್ರಮುಖರು. ಸಾ. ಶ. 1839 ರಲ್ಲಿ 'ಪೊಸಿಟಿವ್ ಫಿಲಾಸಫಿ' ಎಂಬ ವಿಷಯದ ಕುರಿತಾಗಿ ಸಾರ್ವಜನಿಕ ಉಪನ್ಯಾಸ ನೀಡುವಾಗ ಆಗಸ್ಟ್ ಕಾಮ್ಟೆ ಮೊದಲ ಬಾರಿಗೆ ಸಮಾಜಶಾಸ್ತ್ರ ಎಂಬ ಪದವನ್ನು ಬಳಸಿದರು.



ಇವರ ಪೂರ್ಣ ಹೆಸರು- ಇಸಿಡೂರ ಆಗಸ್ಟ್ ಮೇರಿ ಫ್ರಾಂಕಾಯಿಸ್ ಝೇವಿಯರ್ ಕಾಮ್ಟೆ ಸಾಮಾನ್ಯವಾಗಿ ಆಗಸ್ಟ ಕಾಮ್ಟ್ ಎಂದು ಪರಿಚಿತರಾಗಿದ್ದಾರೆ. ಇವರು ದಕ್ಷಿಣ ಫ್ರಾನ್ಸ್‌ನ ಮೋಂಟ್ ಪೆಲಿಯರ್ ಎಂಬಲ್ಲಿ 1798 ಜನವರಿ 19 ರಂದು ಕ್ಯಾಥೋಲಿಕ್ ಸಮುದಾಯದಲ್ಲಿ ಜನಿಸಿದ್ದಾರೆ. ಇವರು ಇಂಪಿರಿಯಲ್ ಶಾಲೆಯಲ್ಲಿ ತನ್ನ ಆರಂಭಿಕ ಶಿಕ್ಷಣ ಮುಗಿಸಿದರು. ಮುಂದೆ ಇಕೋಲ್ ಪಾಲಿಟೆಕ್ನಿಕ್ ಕಾಲೇಜಿನಲ್ಲಿ ಅಧ್ಯಾಪಕರಾದರು.

**ಇವರ ಪ್ರಮುಖ ಕೂಡುಗೆಗಳು:** ಪಾಸಿಟಿವ್ ಫಿಲಾಸಫಿ- 1839, ಪಾಸಿಟಿವ್ ಪಾಲಿಟಿ-1851, ಮಾನವತಾಧರ್ಮ-1857, ಮೂರು ಹಂತಗಳ ಸೂತ್ರ ಹೀಗೆ ಇವರು ಹಲವು ಸಮಾಜಶಾಸ್ತ್ರ ಗ್ರಂಥಗಳನ್ನು ಬರೆದಿದ್ದಾರೆ. ಆಗಸ್ಟ್ ಕಾಮ್ಟೆ ಅವರು ಸೆಪ್ಟಂಬರ್ 5, 1857 ತಮ್ಮ 59 ನೇ ವರ್ಷದಲ್ಲಿ ಮರಣ ಹೊಂದಿದರು.

## *h2. ಕಾರ್ಲ ಮಾರ್ಕ್ಸ್ (1818-1883):*

ಕಾರ್ಲ್ ಮಾರ್ಕ್ಸ್, ಸಾ. ಶ. 19 ನೇ ಶತಮಾನದ ವಿಶ್ವಮಾನ್ಯ ಸಾಮಾಜಿಕ ಚಿಂತಕ. ಕಾರ್ಲ್ ಮಾರ್ಕ್ಸ್ ಒಬ್ಬ ರಾಜಕೀಯ ಕ್ರಾಂತಿಕಾರಿ, ಚತುರ ಸಂಘಟಕ ಮತ್ತು ತೀಕ್ಷ್ಣ ಬರಹಗಾರ. ಕಾರ್ಲ್ ಮಾರ್ಕ್ಸ್‌ರನ್ನು ಸಂಘರ್ಷ ಸಿದ್ಧಾಂತದ ಪ್ರವರ್ತಕನೆಂದು ಕರೆಯಲಾಗುತ್ತದೆ. ಇವರು ದುಡಿಯುವ ವರ್ಗಗಳು ಮತ್ತು ಕಾರ್ಮಿಕರನ್ನು ಕುರಿತು ನಡೆಸಿದ ಚಿಂತನೆ, ಅಧ್ಯಯನ ಮತ್ತು ಬರವಣಿಗೆಗಳು ಕಾರ್ಮಿಕರ ಹೋರಾಟಕ್ಕೆ ಹೊಸದಿಕ್ಕನ್ನು ನೀಡಿದೆ.



ಮಾರ್ಕ್ಸ್ ಅವರು ಸಾ. ಶ. 1818 ಮೇ 5 ರಂದು ಜರ್ಮನಿಯ ಟ್ರೆಯರ್ ಎಂಬಲ್ಲಿ ಜನಿಸಿದರು. ತಂದೆ-ತಾಯಿ ಹೀನ್ರಿಚ್ ಮತ್ತು ಹೆನ್ರಿಯಟ್ ಮಾರ್ಕ್ಸ್ ಹಾಗೂ ಹೆಂಡತಿ ಜೆನ್ನಿವಾನ್ ವೆಸ್ಟ್‌ಪೆಲೀನ್. ಹೆಗೆಲನ್ ಕಾರ್ಲ್ ಮಾರ್ಕ್ಸ್ ಅವರ ನೆಚ್ಚಿನ ಗುರುವಾಗಿದ್ದರು. ಕ್ರಿ ಶ 1841 ರಲ್ಲಿ ಕಾನೂನು ವಿಷಯದ ಪಿ. ಎಚ್. ಡಿ. ಪದವಿ ಪಡೆದು ವೃತ್ತಿ ಜೀವನ ಆರಂಭಿಸಿದರು.

**ಇವರ ಪ್ರಮುಖ ಕೂಡುಗೆಗಳು:** ದಾಸ್ ಕ್ಯಾಪಿಟಲ್-1865, ದಿ ಹೋಲಿ ಫ್ಯಾಮಿಲಿ, ದಿ ಜರ್ಮನ್ ಐಡಿಯಾಲೊಜಿ-1845, ದಿ ಮ್ಯನಿಫೆಸ್ಟೂ ಆಫ್ ದಿ ಕಮ್ಯೂನಿಸ್ಟ್ ಪಾರ್ಟಿ-1848 ಇತ್ಯಾದಿ. ಕಾರ್ಲ್ ಮಾರ್ಕ್ಸ್ ಅವರು ಮಾರ್ಚ್ 14, 1883 ರಲ್ಲಿ ಮರಣ ಹೊಂದಿದರು. ಇವರು ಮರಣ ಹೊಂದಿ ಒಂದು ಶತಮಾನ ಕಳೆದರೂ ಅವರ ವಿಚಾರಗಳು, ಸಿದ್ಧಾಂತಗಳು ಇಂದಿಗೂ ಜೀವಂತವಾಗಿದೆ.

## *3. ಎಮಿಲಿ ಡರ್ಖೆಮ್ (1858-1917):*

ಎಮಿಲಿ ಡರ್ಖೆಮ್ 19 ನೇ ಶತಮಾನದ ಫ್ರಾನ್ಸ್‌ನ ಪ್ರಮುಖ ಸಮಾಜಶಾಸ್ತ್ರಜ್ಞ. ಸಮಾಜಶಾಸ್ತ್ರ ಅಧ್ಯಯನ ವಿಧಾನಗಳು ವಿಜ್ಞಾನಗಳಿಗೆ ಸಮನಾಗಿವೆ ಎಂದು ಸಾಬೀತು ಪಡಿಸಿದ ವಿಶ್ಲೇಷಣಾತ್ಮಕ ಬರಹಗಾರ. ಆಗಸ್ಟ್ ಕಾಮ್ಟೆ ಸಮಾಜಶಾಸ್ತ್ರದ ಪಿತಾಮಹನಾದರೆ, ಡರ್ಖೆಮ್ ಅವರನ್ನು ಸಮಾಜಶಾಸ್ತ್ರದ ಬೆಳವಣಿಗೆಯ ಪಿತಾಮಹ ಎಂದು ಕರೆಯಲಾಗುತ್ತದೆ.



ಎಮಿಲಿ ಡರ್ಖೆಮ್ ಅವರು ಫ್ರಾನ್ಸಿನ ಲೋರೋಯಿನ್ ಪ್ರಾಂತದ ಎಪಿನಾಲ್ ಎಂಬಲ್ಲಿ 1858 ಏಪ್ರಿಲ್, 15 ರಂದು ಜನಿಸಿದರು. ಯಾಹೂದಿ ಸಮುದಾಯಕ್ಕೆ ಸೇರಿದ ಇವರು ಫ್ರಾನ್ಸಿನ, ಡಿ ಎಫಿನಾಲೆಂಬ ಶಾಲೆಯಲ್ಲಿ ಪ್ರತಿಭಾವಂತ ವಿದ್ಯಾರ್ಥಿಯಾಗಿ, ಪ್ರಾಧ್ಯಾಪಕರಾಗಿ ವೃತ್ತಿ ಜೀವನ ಆರಂಭಿಸಿದರು.

**ಡರ್ಖೆಮ್ ಇವರ ಪ್ರಮುಖ ಕೊಡುಗೆಗಳು:** ದಿ ಡಿವಿಜನ್ ಆಫ್ ಲೇಬರ್ ಇನ್ ಸೊಸೈಟಿ-1893, ಸುಯಿಸೈಡ್ (ಆತ್ಮಹತ್ಯೆ)-1897, ದಿ ರೋಲ್ಸ್ ಆಫ್ ಸೋಸಿಯಲಾಜಿಕಲ್ ಮೆಥಡ್-1895, ದಿ ಎಲಿಮೆಂಟರಿ ಫಾರ್ಮ್ಸ್ ಆಫ್ ರಿಲಿಜಿಯಸ್ ಲೈಫ್-1912 ಇತ್ಯಾದಿ. ಇವರು ತಮ್ಮ 59 ನೇ ವಯಸ್ಸಿನಲ್ಲಿ ಕೊನೆಯುಸಿರೆಳೆದರು.

### *4. ಮ್ಯಾಕ್ಸ್ ವೇಬರ್ (1864-1920):*

ಮಾರ್ಕ್ಸ್ ವೇಬರ್ ಅವರದು ಸಮಾಜವಿಜ್ಞಾನ ಕ್ಷೇತ್ರದಲ್ಲಿ ಅವಿಸ್ಮರಣೀಯ ವ್ಯಕ್ತಿತ್ವ. ಇವರು ಜರ್ಮನಿಯ ಒಬ್ಬ ಪ್ರಭಾವಿ ಬರಹಗಾರ ಮತ್ತು ಪ್ರತಿಭಾವಂತ ರಾಜಕಾರಣಿಯೂ ಹೌದು. ವೇಬರ್ ಕಾನೂನು, ಅರ್ಥಶಾಸ್ತ್ರ, ಧರ್ಮ, ಕಲೆ, ಇತಿಹಾಸ, ಸಮಾಜಶಾಸ್ತ್ರದಲ್ಲಿ ಹೆಚ್ಚಿನ ಆಸಕ್ತಿ ಮತ್ತು ಅಭಿರುಚಿಯನ್ನು ಹೊಂದಿದ್ದರು. ಮಾರ್ಕ್ಸ್ ವೇಬರ್ ಪಶ್ಚಿಮ ಜರ್ಮನಿಯ ಏರಫರ್ಟ್ ಎಂಬಲ್ಲಿ ಏಪ್ರಿಲ್ 21 ರ, 1864 ರಂದು ಪ್ರೊಟೆಸ್ಟಂಟ್ ಕುಟುಂಬವೊಂದರಲ್ಲಿ ಜನಿಸಿದರು. ವೇಬರ್ 18 ನೇ ವಯಸ್ಸಿನಲ್ಲಿ ಜರ್ಮನಿಯ ಹೀಡಲ್‌ಬರ್ಗ್ ವಿಶ್ವವಿದ್ಯಾಲಯದಲ್ಲಿ ಕಾನೂನು ವಿದ್ಯಾರ್ಥಿಯಾಗಿ, ಕಾನೂನು ಶಾಸ್ತ್ರದಲ್ಲಿ ಪಿ. ಎಚ್. ಡಿ.

ಪದವಿ ಪಡೆದು ಬರ್ಲಿನ್ ವಿಶ್ವವಿದ್ಯಾಲಯದಲ್ಲಿ ಬೋಧಕರಾಗಿ ಸೇವೆ ಸಲ್ಲಿಸಿದರು. ಇವರು 56 ನೇ ವಯಸ್ಸಿನಲ್ಲಿ ಮರಣ ಹೊಂದಿದರು.



**ಇವರ ಪ್ರಮುಖ ಕೊಡುಗೆಗಳು:** ದಿ ಜರ್ಮನ್ ಸೋಸಿಯಾಲಾಜಿಕಲ್ ಸೊಸೈಟಿ-1910, ದಿ ಪ್ರೊಟೆಸ್ಟಂಟ್ ಎಥಿಕ್ ಅಂಡ್ ದಿ ಸ್ಪಿರಿಟ್ ಅಫ್ ಕ್ಯಾಪಿಟಲಿಸಂ, ದಿ ಸಿಟಿ, ಬ್ಯೂರೋಕ್ರಸಿ, ಎಕೊನಮಿ ಅಂಡ್ ಸೊಸೈಟಿ, ಇತ್ಯಾದಿ.

## ಭಾರತದ ಪ್ರಮುಖ ಸಮಾಜಶಾಸ್ತ್ರಜ್ಞರು

ಭಾರತದ ಪ್ರಮುಖ ಸಮಾಜಶಾಸ್ತ್ರಜ್ಞರ ವಿವರ ಈ ಕೆಳಗಿನಂತಿದೆ.

### *ಡಾ. ಬಿ. ಆರ್. ಅಂಬೇಡ್ಕರ್ (1891-1956):*

ಆಧುನಿಕ ಭಾರತದ ನಿರ್ಮಾಪಕರ ಶ್ರೇಣಿಯಲ್ಲಿ ಡಾ. ಬಿ. ಆರ್. ಅಂಬೇಡ್ಕರ್ರವರ ಕೊಡುಗೆ ಅತ್ಯಂತ ಮಹತ್ವದ್ದು. ಇವರ ಪೂರ್ಣ ಹೆಸರು ಭೀಮರಾವ್ ರಾಮ್‌ಜಿ ಅಂಬೇಡ್ಕರ್. ಇವರು ಜಗತ್ತಿನ ಪ್ರಮುಖ ಸಮಾಜ ಸುಧಾರಕ ನ್ಯಾಯಶಾಸ್ತ್ರಜ್ಞ ಭಾರತದಲ್ಲಿ ದಲಿತರು ಎದುರಿಸುತ್ತಿರುವ ಅಸ್ಪೃಶ್ಯತೆ ಸೇರಿದಂತೆ ಹಲವು ಸಾಮಾಜಿಕ ಭೇದ ಭಾವನೆಗಳ ವಿರುದ್ಧ ಹೋರಾಡಿದರು. ದಲಿತರು, ಮಹಿಳೆಯರ ಹಕ್ಕುಗಳಿಗಾಗಿ ಸಾಮಾಜಿಕ ಹೋರಾಟಗಳನ್ನು ಸಂಘಟಿಸಿ ಜಾಗೃತಿ ಮೂಡಿಸಿದರು.



ಇದೆಲ್ಲಕ್ಕಿಂತಲೂ ಮುಖ್ಯವಾಗಿ ಭಾರತದ ಸಾಂಸ್ಕೃತಿಕ ಅಸಮಾನತೆ ಸೇರಿದಂತೆ ಎಲ್ಲಾ ಬಗೆಯ ಶ್ರೇಣೀಕೃತ ಶೋಷಣೆ, ತಾರತಮ್ಯ ಮತ್ತು ದೌರ್ಜನ್ಯಗಳನ್ನು ಶಿಕ್ಷಣದ ಮೂಲಕ ಸರಿಪಡಿಸುವ ಭರವಸೆಯನ್ನು ಸಾಧಿಸಿತೋರಿಸಿದ ಮೊದಲಿಗರು ಡಾ. ಬಿ. ಆರ್. ಅಂಬೇಡ್ಕರ್. ಶಿಕ್ಷಣ ಕುರಿತು ಡಾ. ಬಿ. ಆರ್. ಅಂಬೇಡ್ಕರ್ ಅವರ ನಿಲುವು ಹಲವು ತತ್ವ ಶಾಸ್ತ್ರೀಯ ನಿಲುವುಗಳಿಗಿಂತ ಭಿನ್ನವಾದುದು. ಬಿ. ಆರ್. ಅಂಬೇಡ್ಕರ್ ಅವರು ಶಿಕ್ಷಣವು ಸಾಮಾಜಿಕ ಬದಲಾವಣೆಯ ಪ್ರಮುಖ ಸಾಧನ/ ಮಾಧ್ಯಮ ಎಂದು ಪ್ರತಿಪಾದಿಸುತ್ತಾರೆ. ಅಂಬೇಡ್ಕರ್ ಅವರ ಪ್ರಕಾರ ಶಿಕ್ಷಣ ಎನ್ನುವುದು ತರ್ಕ ಸಮ್ಮತವಾದ ಮತ್ತು ವಿಮರ್ಶಾತ್ಮಕವಾದ ವಿಶ್ಲೇಷಣೆ ಮಾಡಲು ಬೇಕಾಗುವ ಸಂಪನ್ಮೂಲಗಳನ್ನು ಗಳಿಸಿಕೊಳ್ಳಲು ಇರುವ ಮಾರ್ಗ. ವಿಶೇಷವಾಗಿ ಭಾರತೀಯ ಸಾಮಾಜಿಕ ಸಂದರ್ಭದಲ್ಲಿ ಪೂರ್ವಾಗ್ರಹಗಳ ಅಪಾಯಗಳು ಮತ್ತು ಪೂರ್ವಾಗ್ರಹಗಳಿಂದ ರೂಪ ಪಡೆಯುವ ಸಾಮಾಜಿಕ ತೇಜೋವಧೆಗಳನ್ನು ಕಾರಣಗಳನ್ನು ತರ್ಕ ಸಮ್ಮತವಾಗಿ ಚರ್ಚಿಸಲು ಶಿಕ್ಷಣ ಅಗತ್ಯ ಎಂದು ಡಾ. ಬಿ. ಆರ್. ಅಂಬೇಡ್ಕರ್ ಹೇಳುತ್ತಾರೆ.

ಶಿಕ್ಷಣವನ್ನು ಎಲ್ಲರಿಗೂ ಕಡ್ಡಾಯ ಮತ್ತು ಉಚಿತವಾಗಿ ನೀಡಬೇಕು. ಏಕೆಂದರೆ ಶಿಕ್ಷಣ ಸಾರ್ವಜನಿಕವಾಗಿ ಸಮಾಜದ ಸಾಮಾಜಿಕ ಬದಲಾವಣೆಗೆ ಲಾಭಕರವಾದ ಗುಣಗಳನ್ನು ಹೊಂದಿದೆ ಎಂದು ತಿಳಿದ ಅಂಬೇಡ್ಕರ್ ಶಿಕ್ಷಣ ಸಾರ್ವಜನಿಕ ಸ್ವತ್ತಾಗಬೇಕು ಎಂದು ಪ್ರತಿಪಾದಿಸುತ್ತಾರೆ. ಈ ರೀತಿಯಾದ ಕ್ರಾಂತಿಕಾರಿ ಚಿಂತನೆಗಳಿಂದಲೇ ಅಂಬೇಡ್ಕರ್ ಅವರು ಸಂವಿಧಾನ ಕರಡು ರಚನೆಯಲ್ಲಿ ಅತ್ಯಂತ ರಚನಾತ್ಮಕವಾದ ಪಾತ್ರವನ್ನು ನಿರ್ವಹಿಸಿದ್ದಾರೆ.

ಪ್ರಾಯಶಃ ಈ ಕಾರಣದಿಂದಲೇ ಇಂಡಿಯಾದ ಸಂವಿಧಾನವು ವಿಶ್ವದಲ್ಲಿಯೆ ವಿಶಿಷ್ಟವಾದ ನ್ಯಾಯ ಮತ್ತು ಸಮಾನತೆಯನ್ನು ನೀಡುವ ದಿಕ್ಕಿನಲ್ಲಿ ಮಹತ್ವವನ್ನು ಪಡೆದಿದೆ.

**ಜೀವನ ಮತ್ತು ಶಿಕ್ಷಣ:** ಬಿ. ಆರ್. ಅಂಬೇಡ್ಕರ್ ಅವರು ಮಹಾರಾಷ್ಟ್ರದ ಅಂಬಾವಾಡೆ ಎಂಬ ಗ್ರಾಮದಲ್ಲಿ ಏಪ್ರಿಲ್ 14, 1891 ರಂದು ಜನಿಸಿದರು. ಅಂಬೇಡ್ಕರ್ 6 ವರ್ಷದಲ್ಲಿದ್ದಾಗ ತಾಯಿಯನ್ನು ಕಳೆದುಕೊಂಡು ಚಿಕ್ಕಮ್ಮ ಮೀರಾಬಾಯಿಯವರ ಆಶ್ರಯದಲ್ಲಿ ಬೆಳೆದರು. ಇವರು ಸತಾರಾದಲ್ಲಿ ಪ್ರಾಥಮಿಕ ಶಿಕ್ಷಣವನ್ನುಆರಂಭಿಸಿದರು.

ಮುಂಬೈನ ಪ್ರಖ್ಯಾತ ಎಲ್ಫೀನ್‌ಸ್ಟನ್ ಪ್ರೌಢಶಾಲೆಗೆ ಸೇರಿ 1907 ರಲ್ಲಿ ಮೆಟ್ರಿಕ್ ಹಂತದಲ್ಲಿ ಪ್ರಥಮ ಶ್ರೇಣಿಗಳಿಸಿ ತೇರ್ಗಡೆಯಾಗುತ್ತಾರೆ. ರಮಾಬಾಯಿ ಎಂಬ ಕನ್ಯೆಯೊಂದಿಗೆ ವಿವಾಹವಾದರು. ಮಹಾರಾಜರಿಂದರೂ. 25 ರೂ ವಿದ್ಯಾರ್ಥಿ ವೇತನ ಪಡೆದು ಬಿ. ಎ. ಮತ್ತು ಎಂ. ಎ. ಪದವಿ ಪಡೆದು, 1916 ರಲ್ಲಿ ಕೊಲಂಬಿಯ ವಿಶ್ವವಿದ್ಯಾಲಯದಿಂದ ಡಾಕ್ಟರೇಟ್ ಪದವಿ ಪಡೆಯುತ್ತಾರೆ. 1920 ರಲ್ಲಿ ಮೂಕನಾಯಕ ಎಂಬ ಪಾಕ್ಷಿಕವನ್ನು ಆರಂಭಿಸುತ್ತಾರೆ. ಡಾ. ಬಿ. ಆರ್. ಅಂಬೇಡ್ಕರ್‌ರವರ ಪ್ರಮುಖ ಪುಸ್ತಕಗಳೆಂದರೆ ಜಾತಿ ವಿನಾಶ-1936, ಯಾರು ಶೂದ್ರರು-1946, ಬುದ್ಧ ಮತ್ತು ಅವನ ಧಮ್ಮ-1957, ಇತ್ಯಾದಿ. ಇವರ ಎಲ್ಲಾ ಬರವಣಿಗೆಗಳನ್ನು ಕರ್ನಾಟಕ ಸರ್ಕಾರ 26 ಸಂಪುಟಗಳಲ್ಲಿ ಮುದ್ರಿಸಿ ಪ್ರಕಟಿಸಿದೆ. ಡಾ. ಬಿ. ಆರ್. ಅಂಬೇಡ್ಕರ್ ಅವರು ಡಿಸೆಂಬರ್ 6, 1956 ರಂದು ನಿಧನರಾದರು.

## *ಜಿ. ಎಸ್. ಘುರ್ಯೆ (1893-1984):*

ಭಾರತದ ವಿಶ್ವವಿದ್ಯಾಲಯಗಳ ಹಂತದಲ್ಲಿ ಸಮಾಜಶಾಸ್ತ್ರದ ಅಧ್ಯಯನ ಮತ್ತು ಬೋಧನಾ ವಿಭಾಗಗಳನ್ನು ಪ್ರಾರಂಭಿಸುವಲ್ಲಿ ಘುರ್ಯೆ ಅವರು ಮುಖ್ಯ ಪಾತ್ರ ವಹಿಸಿದ್ದಾರೆ. ಇವರ ಪೂರ್ಣ ಹೆಸರು ಗೋವಿಂದ ಸದಾಶಿವ ಘುರ್ಯೆ. ಇವರು ಡಿಸೆಂಬರ್ 12, 1893 ರಂದು ಮಹಾರಾಷ್ಟ್ರ ಮಾಲ್ವನ್ ಎಂಬಲ್ಲಿ ಜನಿಸಿದರು. ಮುಂಬೈ ವಿಶ್ವವಿದ್ಯಾನಿಲಯದಲ್ಲಿ ಕಾಲೇಜು ಶಿಕ್ಷಣವನ್ನು ಪೂರೈಸಿದರು. ಲಂಡನ್ನಿನ ಕೇಂಬ್ರಿಡ್ಜ್ ವಿಶ್ವವಿದ್ಯಾಲಯದಲ್ಲಿ ಪಿ. ಎಚ್. ಡಿ. ಪದವಿ ಪಡೆದು 1924 ರಲ್ಲಿ ಭಾರತಕ್ಕೆ ಬಂದು ಬೊಂಬಾಯಿ ವಿಶ್ವವಿದ್ಯಾಲಯದಲ್ಲಿ ಸಮಾಜಶಾಸ್ತ್ರ ಬೋಧನೆ ಮತ್ತು ಅಧ್ಯಯನ ವಿಭಾಗವನ್ನು ಪ್ರಾರಂಭಿಸಿ ಅದರ ಸ್ಥಾಪಕ ಮುಖ್ಯಸ್ಥರಾಗಿ ಕಾರ್ಯ ನಿರ್ವಹಿಸಿದರು. ಇವರ ಪ್ರಮುಖ ಸಂಶೋಧನಾ ಪುಸ್ತಕಗಳೆಂದರೆ, ಕಾಸ್ಟ್ ಅಂಡ್ ರೇಸ್ ಇನ್ ಇಂಡಿಯಾ-1932; ಶೆಡ್ಯೂಲ್ಡ್ ಟ್ರೈಬ್-1943; ಭಾರತೀಯ ಸಾಧುಗಳು-1953; ಮಾತ್ರವಲ್ಲದೆ ಇವರು 30 ಕ್ಕೂ ಹೆಚ್ಚು ಪುಸ್ತಕಗಳನ್ನುರಚಿಸಿದ್ದಾರೆ.



## *ಎಂ. ಎನ್. ಶ್ರೀನಿವಾಸ್ (1916-1999):*

ಎಂ. ಎನ್. ಶ್ರೀನಿವಾಸ್ ಅವರು ಅಂತಾರಾಷ್ಟ್ರೀಯ ಖ್ಯಾತಿಯ ಭಾರತದ ಪ್ರಮುಖ ಸಮಾಜಶಾಸ್ತ್ರಜ್ಞರು. ಕ್ಷೇತ್ರಾಧಾರಿತ ದೃಷ್ಟಿಕೋನ ಎಂಬ ಅಧ್ಯಯನವನ್ನು ಬಳಸಿ ಸಮಾಜ ಸಂಶೋಧನೆಯನ್ನು ಜನಪ್ರಿಯಗೊಳಿಸಿದರು. ಇವರು ಸ್ಟ್ಯಾನ್ಫರ್ಡ್ ವಿಶ್ವವಿದ್ಯಾಲಯದಲ್ಲಿದ್ದಾಗ ಅಲ್ಲಿ ನಡೆದ ವಿದ್ಯಾರ್ಥಿ ಚಳವಳಿಯಲ್ಲಿ ಇವರ ಕ್ಷೇತ್ರ ಕಾರ್ಯ ಟಿಪ್ಪಣಿಗಳು ಬೆಂಕಿಗೆ ತುತ್ತಾದ ದುರಂತದ ನಂತರ 'ದಿ ರಿಮೆಂಬರ್ಡ್ ವಿಲೇಜ್' ಎಂಬ ಸಾರ್ವಕಾಲಿಕ ಕೃತಿಯನ್ನು 1976 ರಲ್ಲಿ ಮೊದಲು ಪ್ರಕಟಣೆ ಮಾಡಿದ್ದರು. ನಂತರ ಇದು ಅನೇಕ ಮರುಮುದ್ರಣಗಳನ್ನು ಕಂಡಿದೆ. ಇದಕ್ಕೂ ಮೊದಲು 1952 ರಲ್ಲಿ ಎಂ. ಎನ್. ಶ್ರೀನಿವಾಸ್ ಅವರಗುರುಗಳಾದ ಎ. ಆರ್. ರ್ಯಾಡಿಕ್ಲಿಫ್ ಬ್ರೌನ್ ಮಾರ್ಗದರ್ಶನದಲ್ಲಿ "ದಕ್ಷಿಣ ಭಾರತದ ಕೊಡವರ ಧರ್ಮ ಮತ್ತು ಸಮಾಜ" ಎಂಬ ಪುಸ್ತಕ ಬರೆದರು.



ಇವರ ಪೂರ್ಣ ಹೆಸರು ಮೈಸೂರು ನರಸಿಂಹಾಚಾರ್ ಶ್ರೀನಿವಾಸ್. ನವೆಂಬರ್ 16, 1916 ರಂದು ಮೈಸೂರಿನಲ್ಲಿ, ನರಸಿಂಹಾಚಾರ್ ಮತ್ತು ರುಕ್ಮಿಣಿ ದಂಪತಿಗಳ ಪುತ್ರನಾಗಿ ಜನಿಸಿದರು. ಬೊಂಬಾಯಿ ವಿಶ್ವವಿದ್ಯಾಲಯದಲ್ಲಿ ಎಂ. ಎ., ಎಲ್. ಎಲ್. ಬಿ. ಮತ್ತು ಪಿ. ಎಚ್. ಡಿ. ಪದವಿ ಪಡೆದು ಆಕ್ಸ್‌ಫರ್ಡ್‌ನಲ್ಲಿ ಡಿ. ಫಿಲ್. ಪದವಿ ಪಡೆದು, ದೆಹಲಿಯಲ್ಲಿ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದರು.

**ಇವರ ಪ್ರಮುಖ ಕೊಡುಗೆಗಳು:** ದಕ್ಷಿಣ ಭಾರತದ ಕೊಡವರ ಧರ್ಮ ಮತ್ತು ಸಮಾಜ-1952, ಇಂಡಿಯನ್ ವಿಲೇಜಸ್, ಸೋಸಿಯಲ್ ಚೇಂಜ್ ಇನ್ ಮಾಡರ್ನ್ ಇನ್ ಇಂಡಿಯಾ-1966, ರಿಮೆಂಬರ್ಡ್ ವಿಲೇಜ್-1976 ಇತ್ಯಾದಿ.

### *ಪಾರ್ವತಮ್ಮ ಸಿ:*

ಪಾರ್ವತಮ್ಮ ಅವರು ಕರ್ನಾಟಕದವರಾಗಿದ್ದು ಸಮಕಾಲೀನ ಭಾರತದ ಪ್ರಮುಖ ಮಹಿಳಾ ಸಮಾಜಶಾಸ್ತ್ರಜ್ಞರಲ್ಲಿ ಒಬ್ಬರು. ಸಿ. ಪಾರ್ವತಮ್ಮ ಅವರು ಅತ್ಯಂತ ಕಷ್ಟದಲ್ಲಿ ಬೆಳೆದವರು. ಅವರು ಹುಟ್ಟಿದ ದಿನದಿಂದ ಅನೇಕ ಎಡರು ತೊಡರುಗಳನ್ನು ಎದುರಿಸಿ ಭಾರತದ ಪ್ರಮುಖ ಸಮಾಜಶಾಸ್ತ್ರಜ್ಞರಾಗಿ ಬೆಳೆದವರು. ಪಾರ್ವತಮ್ಮ ಅವರು ದಾವಣಗೆರೆ ಜಿಲ್ಲೆಯ (ಮೊದಲು ಚಿತ್ರದುರ್ಗ ಜಿಲ್ಲೆಯ ದಾವಣಗೆರೆ ತಾಲೂಕಿಗೆ ಸೇರಿದ) ಸ್ಯಾಗಲ್ಲಿ ಎನ್ನುವ ಹಳ್ಳಿಯಲ್ಲಿ ಜೂನ್ 1928 ರಲ್ಲಿ ಜನಿಸಿದರು. ಇವರ ನಿಖರವಾದ ಜನ್ಮದಿನಕ್ಕೆ ದಾಖಲೆಗಳು ದೊರೆಯದ ಕಾರಣ ಶಾಲೆಗೆ ಪ್ರವೇಶ ಪಡೆದ ದಾಖಲೆಯನ್ನು ಮಾತ್ರ ಪರಿಗಣಿಸಲಾಗಿದೆ. ಸಿ. ಪಾರ್ವತಮ್ಮ ಅವರು 9 ತಿಂಗಳ ಮಗುವಾಗಿರುವಾಗಲೇ ಅವರ ತಂದೆ ಮರಣ ಹೊಂದುತ್ತಾರೆ. ಅವರು ಅಜ್ಜಿಯ ಮನೆಯಲ್ಲಿ ದೊರೆತ ನೈತಿಕ ಮತ್ತು ಭೌತಿಕ ಬೆಂಬಲದಿಂದ ಚಿಕ್ಕ ವಯಸ್ಸಿನ ತಾಯಿಯೊಂದಿಗೆ ಬೆಳೆಯುತ್ತಾರೆ.

ಸಿ. ಪಾರ್ವತಮ್ಮ ಅವರು ತಮ್ಮ ಪ್ರಾಥಮಿಕ ಶಿಕ್ಷಣವನ್ನು ತಮ್ಮ ಹುಟ್ಟೂರಿನಲ್ಲಿದ್ದ ಏಕ ಶಿಕ್ಷಕರ ಶಾಲೆಯಲ್ಲಿ ಮುಗಿಸುತ್ತಾರೆ. ಮಾಧ್ಯಮಿಕ ಶಿಕ್ಷಣವನ್ನು ಅವರು ಪಕ್ಕದ ಲೋಕಿಕೆರೆಯಲ್ಲಿ, ನಂತರ ಸರ್ಕಾರಿ ಪ್ರೌಢಶಾಲೆ ದಾವಣಗೆರೆಯಲ್ಲಿ ತಮ್ಮ ಪ್ರೌಢಶಿಕ್ಷಣವನ್ನು ಪೂರೈಸುತ್ತಾರೆ. 1945 ರಲ್ಲಿ ಅವರು ಇಂಟರ್ ಮೀಡಿಯಟ್ ಕಾಲೇಜು ದಾವಣಗೆರೆಯಲ್ಲಿ ಇದ್ದರೂ ಸಹ ಪಾರ್ವತಮ್ಮ ಅವರ ಶಿಕ್ಷಕರೊಬ್ಬರು ಇವರ ಶಿಕ್ಷಣ ಮುಂದುವರೆಯಲಿ

ಎನ್ನುವ ಕಾಳಜಿಯಿಂದ ಕಾಂತರಾಜು ಶೆಟ್ಟಿ ಎನ್ನುವ ಡಿ. ಡಿ. ಪಿ. ಐ. ಸಹಕಾರದೊಂದಿಗೆ ಮೈಸೂರಿನ ಸಮುದಾಯ ವಸತಿ ನಿಲಯದಲ್ಲಿ ವಸತಿ ವ್ಯವಸ್ಥೆ ಮಾಡಿ, ಮೈಸೂರಿನ ಮಹಾರಾಣಿ ಕಾಲೇಜಿನಲ್ಲಿ ಇಂಟರ್ ಮೀಡಿಯೇಟ್ ಪ್ರವೇಶ ಪಡೆಯಲು ಅವಕಾಶ ಒದಗಿಸುತ್ತಾರೆ.

ಹಲವಾರು ಸವಾಲುಗಳ ನಡುವೆ ಶಿಕ್ಷಣ ಮುಂದುವರೆಸಿದ ಪಾರ್ವತಮ್ಮ ಅವರು ಕಲಾ ವಿಷಯದಲ್ಲಿ ಇಂಟರ್ ಮೀಡಿಯಟ್‌ನಲ್ಲಿ ದ್ವಿತೀಯ ಶ್ರೇಣಿಯಲ್ಲಿ ತೇರ್ಗಡೆ ಹೊಂದಿ, ನಂತರ ಬಿ. ಎ. ಆನರ್ಸ್‌ಗೆ ಮಹಾರಾಜ ಕಾಲೇಜಿನಲ್ಲಿ ಸಾಮಾಜಿಕ ತತ್ವಶಾಸ್ತ್ರಕ್ಕೆ ಪ್ರವೇಶ ಪಡೆದರು. ಆ ಮಾಧ್ಯಮಿಕ ಶಾಲೆಯಿಂದ ಬಿ. ಎ. ಆನರ್ಸ್ ಶಿಕ್ಷಣದವರೆಗೆ ವಿದ್ಯಾರ್ಥಿವೇತನ ಪಡೆದು ಓದಿ ಬಿ. ಎ. ಆನರ್ಸ್‌ನಲ್ಲಿ ಪ್ರಥಮ ರ್‍ಯಾಂಕ್ ಪಡೆದು ತೇರ್ಗಡೆಯಾಗುತ್ತಾರೆ. ನಂತರ ಅವರ ಪ್ರಾಧ್ಯಾಪಕರೊಬ್ಬರು ಉನ್ನತ ಶಿಕ್ಷಣವನ್ನು ವಿದೇಶದಲ್ಲಿ ಮುಂದುವರೆಸಲು ಸಲಹೆ ನೀಡಿದರು.

ಸಿ. ಪಾರ್ವತಮ್ಮ ಅವರು ಕರ್ನಾಟಕದಿಂದ ವಿದೇಶಕ್ಕೆ ಹೋಗಿ ಕಲಿತು ಕರ್ನಾಟಕಕ್ಕೆ ಬಂದು ನೆಲೆಸಿ, ಸಮಾಜಶಾಸ್ತ್ರವನ್ನು ಇಡೀ ದಕ್ಷಿಣ ಭಾರತದಲ್ಲಿ ವಿಸ್ತರಿಸಲು ನಡೆಸಿದ ಪ್ರಯತ್ನ ಅವರ ಸಾಮಾಜಿಕ ಕಾಳಜಿ ಮತ್ತು ಬದ್ಧತೆಯ ಮಹತ್ವವನ್ನು ತಿಳಿಸುತ್ತದೆ. ಇವರ ಪ್ರಮುಖ ಕೊಡುಗೆಗಳೆಂದರೆ ಪಾಲಿಟಿಕ್ಸ್ ಮತ್ತು ರಿಲಿಜನ್, ಸೋಷಿಯಲಾಜಿಕಲ್ ಎಸ್ಸೇಸ್ ಅನ್ ವೀರಶೈವಿಸಮ್. ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಸಾಮಾಜಿಕ ಆರ್ಥಿಕ ಪರಿಸ್ಥಿತಿ ಕುರಿತು ಇವರು ನಡೆಸಿದ ಸಂಶೋಧನೆ ಈಗಲೂ ಅತ್ಯಂತ ಮಹತ್ವದ್ದಾಗಿದೆ.

### *ಇರಾವತಿ ಕರ್ವೆ:*

ಇರಾವತಿ ಕರ್ವೆ ಅವರನ್ನು ಪ್ರಮುಖ ಸಮಾಜಶಾಸ್ತ್ರಜ್ಞರೆಂದು ಗುರುತಿಸಲಾಗಿದೆ. ಇವರು ಜಿ. ಎಸ್. ಘುರ್ಯೆ ಅವರ ಶಿಷ್ಯರಾಗಿದ್ದಾರೆ. ಪ್ರಸಿದ್ಧ ಸುಧಾರಣಾವಾದಿ, ಮಹರ್ಷಿ ಕರ್ವೆಯವರ ಸೊಸೆಯಾಗಿ ಬಂದ ಇರಾವತಿ ಕರ್ವೆಯವರಲ್ಲಿ ಸಾಮಾಜಿಕ, ರಾಷ್ಟ್ರೀಯ ಮತ್ತು ರಾಜಕೀಯ ವಿಚಾರಗಳ ಕಾಳಜಿ ಇತ್ತು. ಇವರು ಬೊಂಬಾಯಿ ವಿಶ್ವವಿದ್ಯಾಲಯದಲ್ಲಿ ಎಂ. ಎ. ಪದವಿ ಪಡೆದು ಮತ್ತು ಪೂನಾದ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದರು.



**ಇವರ ಕೊಡುಗೆಗಳು:** ಕಿನ್‌ಷಿಪ್ ಆರ್ಗನೈಸೇಷನ್ ಇನ್ ಇಂಡಿಯಾ, ಫ್ಯಾಮಿಲಿ ಇನ್ ಇಂಡಿಯಾ, ಭಾರತೀಯ ಸಮಾಜ, ಸಂಸ್ಥೆಗಳು ಮತ್ತು ಬಂಧುತ್ವ ಇತ್ಯಾದಿ ಕೃತಿಗಳು ಪ್ರಮುಖವಾದವು.

### *ಎ. ಆರ್. ದೇಸಾಯಿ (1915-1994):*

ಭಾರತೀಯ ಸಮಾಜಶಾಸ್ತ್ರಜ್ಞರ ಸಾಲಿನಲ್ಲಿ ಎ. ಆರ್. ದೇಸಾಯಿ ಪ್ರಮುಖರು. ಯು. ಜಿ. ಸಿ. ಯ ನ್ಯಾಷನಲ್ ಫೆಲೋ ಆಗಿ, ಬೊಂಬಾಯಿಯ ವಿಶ್ವವಿದ್ಯಾಲಯ ಸಮಾಜಶಾಸ್ತ್ರದ ಮುಖ್ಯಸ್ಥರಾಗಿ ಕಾರ್ಯನಿರ್ವಹಿಸಿದರು. ಇವರ ಪೂರ್ಣಹೆಸರು ಅಕ್ಷಯ್ ರಮಣಲಾಲ್ ದೇಸಾಯಿ ಇವರು ಕ್ರಿ. ಶ. 1915 ರಲ್ಲಿ ಜನಿಸಿದರು. ಬೊಂಬಾಯಿಯ ವಿಶ್ವವಿದ್ಯಾಲಯದಲ್ಲಿ ಘುರ್ಯೆ ಅವರ ವಿದ್ಯಾರ್ಥಿಯಾಗಿದ್ದು, ತದನಂತರ ಅಲ್ಲಿಯೇ ಪ್ರಾಧ್ಯಾಪಕರಾಗಿ, ಇಲಾಖೆ ಮುಖ್ಯಸ್ಥರಾಗಿದ್ದರು. ಇವರು ಸಮಾಜಶಾಸ್ತ್ರೀಯ ಅಧ್ಯಯನದಲ್ಲಿ ಮಾರ್ಕ್ಸ್ ವಾದಿ ದೃಷ್ಟಿಕೋನವನ್ನು ಅನುಸರಿಸುತ್ತಿದುದ್ದರಿಂದ ಅವರನ್ನು ಮಾರ್ಕ್ಸ್ ವಾದಿ ಸಮಾಜಶಾಸ್ತ್ರಜ್ಞನೆಂದು ಕರೆಯಲಾಗುತ್ತದೆ. ಇವರ ದಿ ಸೋಷಿಯಾಲಾಜಿಕಲ್ ಬ್ಯಾಕ್ ಗ್ರೌಂಡ್ ಆಫ್ ಇಂಡಿಯನ್ ನ್ಯಾಷನಲಿಸಂ ಎಂಬುದು ಇವರ ಅತ್ಯುತ್ತಮ ಕೃತಿಯಾಗಿದೆ. ಭಾರತದಲ್ಲಿ ಗ್ರಾಮೀಣ ಸಮಾಜಶಾಸ್ತ್ರ, ಇಂಡಿಯನ್ ಸೋಷಿಯಾಲಾಜಿಕಲ್ ಸೊಸೈಟಿ, ಸ್ಲಮ್ಸ ಅಂಡ್ ಅರ್ಬನೈಜೆಷನ್, ಇತ್ಯಾದಿ ಕೃತಿಗಳು ಪ್ರಸಿದ್ಧವಾಗಿವೆ.

### ಅಭ್ಯಾಸಗಳು

**I. ಖಾಲಿ ಬಿಟ್ಟಿರುವ ಸ್ಥಳಗಳನ್ನು ಭರ್ತಿಮಾಡಿರಿ.**

1. ಮಾನವ ________ ಜೀವಿ.
2. ಲಾಗೋಸ್ ಎಂದರೆ ________ .
3. ಸಮಾಜಶಾಸ್ತ್ರದ ಪಿತಾಮಹ________ .
4. ಸಂಘರ್ಷ ಸಿದ್ಧಾಂತದ ಪ್ರವರ್ತಕ ಎಂದು ________ ರನ್ನು ಕರೆಯಲಾಗುತ್ತದೆ.
5. ಜಾತಿ ವಿನಾಶ ಪುಸ್ತಕದ ಕರ್ತೃ ________ .

**II. ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿ.**

1. ಸಮಾಜಶಾಸ್ತ್ರದ ಪಿತಾಮಹ ಎಂದು ಯಾರನ್ನು ಕರೆಯಲಾಗುತ್ತದೆ?
2. ಸಮಾಜಶಾಸ್ತ್ರ ಎಂದರೇನು?
3. ಸಮಾಜಶಾಸ್ತ್ರದ ಸ್ವರೂಪವನ್ನು ವಿವರಿಸಿ.

4. ಆರಂಭಿಕ ಪ್ರಮುಖ ಸಮಾಜ ಶಾಸ್ತ್ರಜ್ಞರನ್ನು ಹೆಸರಿಸಿ.
5. ಭಾರತದ ಪ್ರಮುಖ ಸಮಾಜ ಶಾಸ್ತ್ರಜ್ಞರನ್ನು ಹೆಸರಿಸಿ.

## III. ಕೆಳಗಿನ ಪ್ರಶ್ನೆಗಳಿಗೆ ನಾಲ್ಕು ಅಥವಾ ಐದು ವಾಕ್ಯಗಳಿಗೆ ಉತ್ತರಿಸಿ

1. ಮಾನವ ಸಮಾಜಜೀವಿ ಎಂಬುದನ್ನು ವಿವರಿಸಿ.
2. ಸಮಾಜಶಾಸ್ತ್ರ ಮತ್ತು ಇತಿಹಾಸದ ನಡುವಿನ ಸಂಬಂಧವನ್ನು ವಿವರಿಸಿ.
3. ಸಮಾಜಶಾಸ್ತ್ರವು ಏನನ್ನು ಅಧ್ಯಯನ ಮಾಡುತ್ತದೆ?
4. ಕಾರ್ಲ್ ಮಾರ್ಕ್ಸ್ ವರು ರಚಿಸಿದ ಕೃತಿಗಳಾವವು?
5. ಅಂಬೇಡ್ಕರ್ ಅವರ ಆರಂಭಿಕ ಜೀವನವನ್ನು ಕುರಿತು ಬರೆಯಿರಿ.
6. ಕರ್ನಾಟಕದ ಪ್ರಮುಖ ಸಮಾಜಶಾಸ್ತ್ರಜ್ಞರಾದ ಡಾ. ಸಿ. ಪಾರ್ವತಮ್ಮ ಅವರನ್ನು ಕುರಿತು ಬರೆಯಿರಿ.
7. ಭಾರತದ ಪ್ರಮುಖ ಸಮಾಜಶಾಸ್ತ್ರಜ್ಞರಾದ ಡಾ. ಎಂ. ಎನ್. ಶ್ರೀನಿವಾಸ್ ಅವರನ್ನು ಕುರಿತು ಬರೆಯಿರಿ.

## IV. ಚಟುವಟಿಕೆ.

1. ಭಾರತದ ಪ್ರಮುಖ ಸಮಾಜಶಾಸ್ತ್ರಜ್ಞರ ಚಿತ್ರಗಳನ್ನು ಸಂಗ್ರಹಿಸಿರಿ.
2. ಕರ್ನಾಟಕದ ಪ್ರಮುಖ ಸಮಾಜಶಾಸ್ತ್ರಜ್ಞರ ಚಿತ್ರಗಳನ್ನು ಸಂಗ್ರಹಿಸಿರಿ.

## ಅಧ್ಯಾಯ- 2 ಸಂಸ್ಕೃತಿ

**ಈ ಅಧ್ಯಾಯದಲ್ಲಿ ಕೆಳಗಿನ ಅಂಶಗಳನ್ನು ತಿಳಿಯುತ್ತೇವೆ.**

1. ಸಂಸ್ಕೃತಿಯ ಅರ್ಥ ಮತ್ತು ಸ್ವರೂಪ.
2. ಸಂಸ್ಕೃತಿಯ ಗುಣಲಕ್ಷಣಗಳು.
3. ಸಂಸ್ಕೃತಿ ಮತ್ತು ಸಮಾಜದ ನಡುವಿನ ಸಂಬಂಧ.
4. ಸಾಂಸ್ಕೃತಿಕ ಆಚರಣೆಗಳು, ಸಾಂಸ್ಕೃತಿಕ ವೈವಿಧ್ಯತೆ, ಮಹತ್ವ ಮತ್ತು ಪ್ರಾಮುಖ್ಯತೆ.

### ಸಂಸ್ಕೃತಿಯ ಅರ್ಥ

ಮಾನವ ಜೀವಿ ಸಾಮಾಜಿಕ-ಸಂಘ ಜೀವಿ ಮಾತ್ರವಲ್ಲದೆ, ಸಾಂಸ್ಕೃತಿಕ ಜೀವಿಯೂ ಹೌದು. ಸಂಸ್ಕೃತಿಯು ಮಾನವ ಸಮಾಜವನ್ನು ಪ್ರಾಣಿ ಸಮಾಜದಿಂದ ಭಿನ್ನವಾಗಿಸುವ ವಿಶಿಷ್ಟ ಅಂಶ. ಪ್ರತಿಯೊಂದು ಮನುಷ್ಯನನ್ನು ಸಂಸ್ಕೃತಿಯ ಪ್ರತಿನಿಧಿ ಎಂದು ಪರಿಗಣಿಸಬಹುದು. ಸಂಸ್ಕೃತಿ ಮತ್ತು ಸಮಾಜ ಒಂದು ನಾಣ್ಯದ ಎರಡು ಮುಖಗಳಿದ್ದಂತೆ. ಮಾನವನ ಸಾಮಾಜಿಕ, ಧಾರ್ಮಿಕ ರಾಜಕೀಯ, ಆರ್ಥಿಕ ಹಾಗೂ ಆಧ್ಯಾತ್ಮಿಕ ಇನ್ನೂ ಮುಂತಾದ ಅಂಶಗಳು ಸಂಸ್ಕೃತಿಯಿಂದಲೇ ನಿರ್ಧರಿಸಲ್ಪಡುತ್ತವೆ. ಸಂಸ್ಕೃತಿಯನ್ನು ಸಾಮಾಜಿಕ ಬದಲಾವಣೆಯ ಮುಖ್ಯ ಅಂಶವಾಗಿ ಪರಿಗಣಿಸಲಾಗುತ್ತದೆ. ಸಂಸ್ಕೃತಿಯನ್ನು ಮಾನವನ ಸಾಮಾಜಿಕ ಪರಂಪರೆಯ ಜೈವಿಕ ವ್ಯವಸ್ಥೆ ಎಂದು ವಿಶ್ಲೇಷಿಸಲಾಗಿದೆ.

ಸಂಸ್ಕೃತಿಯು ಒಂದು ನಿರ್ದಿಷ್ಟ ಜನಸಮುದಾಯದ ಜೀವನ ವಿಧಾನ, ಸಂಗೀತ, ಸಾಹಿತ್ಯ, ಕಲೆ, ವಿಜ್ಞಾನ, ತಂತ್ರಜ್ಞಾನ ಮುಂತಾದ ಸಾಧನೆಗಳನ್ನು ಸೂಚಿಸುತ್ತದೆ. ಮಾನವ ಸಮಾಜನ್ನು ಅರ್ಥಪೂರ್ಣ ಮತ್ತು ವಿಶಿಷ್ಟವಾಗಿಸುವುದು ಸಂಸ್ಕೃತಿ. ಸಮಾಜಶಾಸ್ತ್ರ ಮತ್ತು ಮಾನವಶಾಸ್ತ್ರದಲ್ಲಿ ಈ ಪರಿಕಲ್ಪನೆಯನ್ನು ವಿಶಿಷ್ಟ ಅರ್ಥದಲ್ಲಿ ಬಳಸಲಾಗಿದೆ.

ಸಂಸ್ಕೃತಿ ಎನ್ನುವುದು ಜ್ಞಾನ, ಅನುಭವ, ನಂಬಿಕೆ, ಮೌಲ್ಯ, ನಡವಳಿಕೆ, ಶ್ರೇಣೀಕರಣ, ಸಂಬಂಧ ಇನ್ನೂ ಮುಂತಾದ ವಿಷಯಗಳನ್ನು ತಲೆಮಾರುಗಳ ಜನರಿಂದ ಪಡೆಯುವ ಪ್ರಕ್ರಿಯೆಯನ್ನು ವಿವರಿಸುತ್ತದೆ. ಹೀಗಾಗಿ ಸಂಸ್ಕೃತಿ ಎಂದರೆ ವಿಸ್ತತವಾದ ಜನರ ಗುಂಪು ಹಂಚಿಕೊಂಡ ವ್ಯವಸ್ಥಿತ ಜೀವನ ಮತ್ತು ಜ್ಞಾನ ಎಂದು ಕರೆಯಲಾಗುತ್ತದೆ.

ಸಂಸ್ಕೃತಿ ಎಂದರೆ ಒಂದು ಗುಂಪಿನ ಜನರ ಜೀವನ ಕ್ರಮ. ಇಲ್ಲಿ ನಡವಳಿಕೆಗಳು, ನಂಬಿಕೆಗಳು, ಮೌಲ್ಯಗಳು ಮತ್ತು ಆ ಜನರ ಗುಂಪು ಒಪ್ಪಿಕೊಂಡಿರುವ ಜೀವನ ಸಂಕೇತಗಳು ಇರುತ್ತವೆ. ಸಾಮಾನ್ಯವಾಗಿ ಅವುಗಳನ್ನು ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ರವಾನೆ ಮಾಡಲಾಗುತ್ತಿರುತ್ತದೆ.

## *ಸಂಸ್ಕೃತಿ ಪದದ ಅರ್ಥ:*

'ಕಲ್ಚರ್' ಎಂಬ ಇಂಗ್ಲಿಷ್ ಪದವು ಲ್ಯಾಟೀನ್ ಭಾಷೆಯ ಕೂಲೆರ್ ಎಂಬ ಮೂಲ ಪದದಿಂದ ಉತ್ಪತ್ತಿ ಹೊಂದಿದೆ. ಇದರ ಅರ್ಥ ಬೆಳೆಸು, ಪೋಷಿಸು, ಭೂಮಿಯನ್ನು ಉಳು ಎಂಬ ಅರ್ಥವನ್ನು ಹೊಂದಿದೆ. ಮಧ್ಯಕಾಲೀನ ಯುಗದಲ್ಲಿ "ಕಲ್ಚರ್" ಎಂಬ ಪದಕ್ಕೆ ಬಿತ್ತಿದ ಬೆಳೆಯ ಪ್ರಗತಿದಾಯಕ ಸುಧಾರಣೆಯನ್ನು ಸೂಚಿಸಲು "ಅಗ್ರಿಕಲ್ಚರ್" ಎಂಬ ರೂಪ ನೀಡಲಾಗಿದೆ. ಆದರೆ 18 ಹಾಗೂ 19 ನೇ ಶತಮಾನದಲ್ಲಿ ಮಾನವನ ವರ್ತನೆಯ ಸ್ವರೂಪವನ್ನು ಸೂಚಿಸಲು 'ಕಲ್ಚರ್' ಪದವನ್ನು ಬಳಸುವ ಪರಿಪಾಠ ಆರಂಭವಾಗಿದೆ.

## ಸಂಸ್ಕೃತಿ ಕುರಿತ ವ್ಯಾಖ್ಯೆಗಳು

**ಇ. ಬಿ. ಟೇಲರ್ ಪ್ರಕಾರ:** ಮಾನವ ಸಮಾಜದ ಒಬ್ಬ ಸದಸ್ಯನಾಗಿ ಗಳಿಸಿಕೊಳ್ಳುವ ಜ್ಞಾನ, ನಂಬಿಕೆ, ಕಲೆ, ನೀತಿಗಳು, ಕಾನೂನು, ಸಂಪ್ರದಾಯ ಮತ್ತು ಇತರೆ ಯಾವುದೇ ಸಾಮರ್ಥ್ಯಗಳು ಮತ್ತು ರೂಢಿಗಳನ್ನು ಹೊಂದಿರುವ ಅಖಂಡವಾದ ಸಂಕೀರ್ಣ ವ್ಯವಸ್ಥೆಯೇ ಸಂಸ್ಕೃತಿ.[೮]

**ಮಾಲಿನೋವ್‌ಸ್ಕಿ ಪ್ರಕಾರ:** ಮಾನವ ತನ್ನ ಜೀವಿತದ ಗೊತ್ತು ಗುರಿಗಳನ್ನು ರೂಪಿಸಿಕೊಳ್ಳಲು ನಿರ್ಮಿಸಿಕೊಂಡ ಸಾಧನವೇ ಸಂಸ್ಕೃತಿ.

## ಸಂಸ್ಕೃತಿಯ ಪ್ರಕಾರಗಳು

ಸಂಸ್ಕೃತಿಯನ್ನು ಭೌತಿಕ ಸಂಸ್ಕೃತಿ ಮತ್ತು ಅಭೌತಿಕ ಸಂಸ್ಕೃತಿ ಎಂದು ಎರಡು ಪ್ರಕಾರಗಳಾಗಿ ವಿಭಾಗಿಸಬಹುದು. ಭೌತಿಕ ಸಂಸ್ಕೃತಿಯಲ್ಲಿ ಕಣ್ಣಿಗೆ ಗೋಚರಿಸುವ ಸ್ಥೂಲ ವಸ್ತುಗಳು, ನಾವು ಬಳಸುವ ಉಪಕರಣಗಳು, ಇತ್ಯಾದಿ ಸೇರಿವೆ. ನಮ್ಮ ಆಲೋಚನೆಗಳು, ಚಿಂತನೆಗಳು, ನಂಬಿಕೆಗಳು, ಮೌಲ್ಯ, ಇತ್ಯಾದಿ ಅಭೌತಿಕ ಸಂಸ್ಕೃತಿಗೆ ಸೇರುತ್ತವೆ.

ಸಂಸ್ಕೃತಿಯ ಸಮಗ್ರತೆಯನ್ನು ವಿವರಿಸಲು ಆಗ್‌ಬರ್ನ್ ಸಂಸ್ಕೃತಿಯನ್ನು ಭೌತಿಕ ಸಂಸ್ಕೃತಿ ಮತ್ತು ಅಭೌತಿಕ ಸಂಸ್ಕೃತಿ ಎಂದು ವಿಂಗಡಿಸಿರುವುದನ್ನು ಇಲ್ಲಿ ಉಲ್ಲೇಖಿಸಬಹುದು. ಇವೆರಡೂ ಮಾನವ ನಿರ್ಮಿತವಾಗಿರುತ್ತವೆ. ಆಗ್‌ಬರ್ನ್ ಪ್ರಕಾರ ಭೌತಿಕ ಸಂಸ್ಕೃತಿ ಎಂದರೆ ನೈಸರ್ಗಿಕ ಸಂಪನ್ಮೂಲಗಳಿಂದ ಪರಿವರ್ತಿಸಿದ ಮಾನವನಿರ್ಮಿತ ವಸ್ತುಗಳಾದ ಮನೆ, ಕಟ್ಟಡ, ಶಾಲೆ, ಸೇತುವೆ, ರಸ್ತೆ, ಅಣೆಕಟ್ಟು, ಯಂತ್ರ, ಉತ್ಪಾದನಾ ವಿಭಾಗ,ಉದ್ದಿಮೆ, ತಂತ್ರಜ್ಞಾನ, ಕಂಪ್ಯೂಟರ್ ಇತ್ಯಾದಿ. ಭೌತಿಕ ಸಂಸ್ಕೃತಿಯನ್ನು ನಾಗರಿಕತೆ ಎಂದೂ ಕರೆಯಲಾಗುತ್ತದೆ. ಭೌತಿಕ ಸಂಸ್ಕೃತಿಯು ಅತೀ ಕಡಿಮೆ ಅವಧಿಯಲ್ಲಿ ಅತೀ ವೇಗವಾಗಿ ಬದಲಾವಣೆಯನ್ನು ಹೊಂದುತ್ತದೆ. ಅಮೂರ್ತವಾದ ಅಭೌತಿಕ ಸಂಸ್ಕೃತಿ ಎಂದರೆ ಮಾನವ ನಿರ್ಮಿತ ಸಾಧನೆಗಳು.

ಉದಾಹರಣೆಗೆ; ಸಂಪ್ರದಾಯ, ಲೋಕಾರೂಢಿ, ನಂಬಿಕೆ, ಆಚಾರ-ವಿಚಾರ, ನೈತಿಕ ನಿಯಮ, ಮೌಲ್ಯಗಳು, ಆದರ್ಶಗಳು, ಕಲೆ, ಸಂಗೀತ, ಸಾಹಿತ್ಯ, ಧರ್ಮ, ಭಾಷೆ ಇತ್ಯಾದಿ. ಭೌತಿಕ ಸಂಸ್ಕೃತಿಗೆ ಹೋಲಿಸಿದರೆ ಅಭೌತಿಕ ಸಂಸ್ಕೃತಿಯು ಪ್ರತಿಯೊಂದು ಸಮಾಜದಲ್ಲಿ ಬಹಳ ನಿಧಾನವಾಗಿ ಬದಲಾವಣೆ ಹೊಂದುವುದು.

## ಸಂಸ್ಕೃತಿಯ ಗುಣಲಕ್ಷಣಗಳು

1. **ಸಂಸ್ಕೃತಿ ಅಮೂರ್ತವಾದದ್ದು:** ಸಂಸ್ಕೃತಿ ಎಂದರೆ ಒಂದು ಗುಂಪಿನ ಜನರ ಜೀವನಕ್ರಮ. ಅಂದರೆ ಒಪ್ಪಿಕೊಂಡಿರುವ ಸಂಕೇತಗಳನ್ನು ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ರವಾನೆಯಾಗುವ ಪ್ರಕ್ರಿಯೆ ನಡೆಯುತ್ತಿರುತ್ತದೆ. ಈ ಪ್ರಕ್ರಿಯೆಯು ಅಮೂರ್ತವಾಗಿ ಅಂದರೆ ದೃಷ್ಟಿಗೆ ಗೋಚರವಾಗದೆ ನಡೆಯುತ್ತಿರುತ್ತದೆ.
2. **ಸಂಸ್ಕೃತಿ ಸಾಮಾಜಿಕವಾದದ್ದು:** ಸಂಸ್ಕೃತಿಯು ವೈಯಕ್ತಿಕವಾದುದಲ್ಲ. ಸಮಾಜದಲ್ಲಿ ಇರುವ ಎಲ್ಲರ ಜೊತೆ ಬದುಕುವುದು, ಆಹಾರ, ಆಚರಣೆ, ಉಡುಪು ಇತ್ಯಾದಿಗಳನ್ನು ಸಾಮುದಾಯಿಕವಾಗಿ ಅನುಸರಿಸುವುದು ಸಾಮಾನ್ಯವಾಗಿರುತ್ತದೆ. ಆದುದ್ದರಿಂದ ಸಂಸ್ಕೃತಿ ಎನ್ನುವುದು ಸಾಮಾಜಿಕವಾದದ್ದು.
3. **ಸಂಸ್ಕೃತಿ ಕಲಿಕೆ:** ಸಂಸ್ಕೃತಿಯು ಮನುಷ್ಯ ಹುಟ್ಟಿನಿಂದಲೇ ಬರುವ ಪ್ರವೃತ್ತಿಯಲ್ಲ. ಪ್ರಕೃತಿ ನಿರ್ಮಿತವೂ ಅಲ್ಲ. ಆದರೆ ಮಾನವ ಸಮಾಜದಲ್ಲಿ ವ್ಯಕ್ತಿವ್ಯಕ್ತಿಗಳ ನಡುವಿನ ಒಡನಾಟಗಳಿಂದ ರೂಪಿತವಾಗುತ್ತಿರುತ್ತದೆ. ಅಂದರೆ ಸಾಮಾಜೀಕರಣ ಪ್ರಕ್ರಿಯೆಯ ಮೂಲಕ ಮಗುವು ಆಯಾ ಸಮಾಜದ ನಡವಳಿಕೆಗಳನ್ನು ತನ್ನದಾಗಿಸಿಕೊಳ್ಳುತ್ತಿರುತ್ತದೆ. ನಿರಂತರ ಅಭ್ಯಾಸ, ಸಂವಾದ, ಚರ್ಚೆ, ಜೀವನಾನುಭವ ಮತ್ತು ಆಲೋಚನೆಗಳ ಮೂಲಕ ಕಲಿಯುವ ಗುಣಗಳೇ ಸಂಸ್ಕೃತಿಯಾಗಿರುತ್ತವೆ. ಉದಾಹರಣೆಗೆ; ಮಕ್ಕಳು ತನ್ನ ಹಿರಿಯರಿಂದ, ಶಿಕ್ಷಕರಿಂದ, ಕುಟುಂಬದ ಸದಸ್ಯರಿಂದ, ಸಮಾಜದ ಸದಸ್ಯರಿಂದ ಮತ್ತು ಸಹಪಾಠಿಗಳಿಂದ ಹೊಸ ಹೊಸ ನಡವಳಿಕೆಗಳನ್ನು ಕಲಿಯುತ್ತಿರುತ್ತಾರೆ.
4. **ಸಾಂಸ್ಕೃತಿಕ ಸಹಜೀವನ:** ಸಂಸ್ಕೃತಿಯು ಸಮಾಜದಲ್ಲಿ ಪ್ರತಿಯೊಬ್ಬ ಸದಸ್ಯರಿಗೂ ತಮ್ಮ ಮೌಲ್ಯಗಳನ್ನು ನಂಬಿಕೆಗಳನ್ನು ಹಂಚಿಕೊಳ್ಳುವ ಅವಕಾಶಗಳನ್ನು ನೀಡುತ್ತದೆ. ಆ ಮೂಲಕ ಸಮಾಜದಲ್ಲಿ ಇರುವ ಎಲ್ಲಾ ರೀತಿಯ ಸಂಪ್ರದಾಯಗಳು, ಲೋಕಾಚಾರಗಳು, ನೈತಿಕ ನಿಯಮಗಳು, ನಂಬಿಕೆ, ಆಚರಣೆಗಳು, ಮೌಲ್ಯಗಳು, ಆದರ್ಶಗಳು ಹಾಗೂ ಭಾಷೆಗಳು ಇವೇ ಮುಂತಾದ ಅಂಶಗಳು ಸಹಭಾಗಿತ್ವಗೊಳ್ಳುವ ಅವಕಾಶವನ್ನು ಸಂಸ್ಕೃತಿ ನೀಡುತ್ತದೆ.
5. **ಸಂಸ್ಕೃತಿಯು ನಿರಂತರವಾದದ್ದು:** ಪ್ರತಿಯೊಂದು ಸಂಸ್ಕೃತಿಯು ಹೊಸ ಹೊಸ ಅಂಶಗಳ ಸೇರ್ಪಡೆಯಿಂದ ನಿರಂತರವಾಗಿ ಬೆಳೆಯುತ್ತದೆ. ಜ್ಞಾನ, ಕಲ್ಪನೆ,

